# ಉಡುಪಿ ತಾಲೂಕಿನ ಕೊರಗ ಮಹಿಳೆಯರ ಅಭಿವೃದ್ಧಿಯ ಸಮಸ್ಯೆಗಳು

ಕನ್ನಡ ವಿಶ್ವವಿದ್ಯಾನಿಲಯ (ಅಭಿವೃದ್ಧಿ ಅಧ್ಯಯನ) ಹಂಪಿಗೆ ಎಂ.ಫಿಲ್
ಪದವಿಗಾಗಿ ಸಾದರ ಪಡಿಸಿದ ಸಂಪ್ರಬಂಧ


ಸಂಶೋಧಕರು

**ಸಹನ ಎಸ್**

ನೋಂದಣಿ ಸಂಖ್ಯೆ: ಕೆಟಿಎಸ್‌ಎಂಡಿಎಸ್೦೦೬೯೮

ಮಾರ್ಗದರ್ಶಕರು

**ಡಾ. ದುಗ್ಗಪ್ಪ ಕಜೆಕಾರ್**

ವಿಭಾಗ ಮುಖ್ಯಸ್ಥರು ಸಮಾಜಕಾರ್ಯ ಸ್ನಾತಕೋತ್ತರ ವಿಭಾಗ

ಸರಕಾರಿ ಪ್ರಥಮ ದರ್ಜೆ ಕಾಲೇಜು ಮತ್ತು

ಸ್ನಾತಕೋತ್ತರ ಅಧ್ಯಯನ ಕೇಂದ್ರ,

ತೆಂಕನಿಡಿಯೂರು, ಉಡುಪಿ.





ಅಧ್ಯಯನ ಕೇಂದ್ರ

ಕರ್ನಾಟಕ ಥಿಯೊಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು.

ಜುಲೈ–2014

# ಉಡುಪಿ ತಾಲೂಕಿನ ಕೊರಗ ಮಹಿಳೆಯರ ಅಭಿವೃದ್ಧಿಯ ಸಮಸ್ಯೆಗಳು

ಕನ್ನಡ ವಿಶ್ವವಿದ್ಯಾನಿಲಯ (ಅಭಿವೃದ್ಧಿ ಅಧ್ಯಯನ) ಹಂಪಿಗೆ ಎಂ.ಫಿಲ್
ಪದವಿಗಾಗಿ ಸಾದರ ಪಡಿಸಿದ ಸಂಪ್ರಬಂಧ

ಸಂಶೋಧಕರು

**ಸಹನ ಎಸ್**

ನೋಂದಣಿ ಸಂಖ್ಯೆ: ಕೆಟಿಎಸ್ಎಂಡಿಎಸ್೦೬೯೮

ಮಾರ್ಗದರ್ಶಕರು

**ಡಾ. ದುಗ್ಗಪ್ಪ ಕಜೆಕಾರ್**

ವಿಭಾಗ ಮುಖ್ಯಸ್ಥರು ಸಮಾಜಕಾರ್ಯ ಸ್ನಾತಕೋತ್ತರ ವಿಭಾಗ
ಸರಕಾರಿ ಪ್ರಥಮ ದರ್ಜೆ ಕಾಲೇಜು ಮತ್ತು
ಸ್ನಾತಕೋತ್ತರ ಅಧ್ಯಯನ ಕೇಂದ್ರ,
ತೆಂಕನಿಡಿಯೂರು, ಉಡುಪಿ.

ಅಧ್ಯಯನ ಕೇಂದ್ರ

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು.

ಜುಲೈ-೨೦೧೪

# ದೃಢೀಕರಣಪತ್ರ

ಕನ್ನಡ ವಿಶ್ವವಿದ್ಯಾನಿಲಯ ಹಂಪಿ ಇಲ್ಲಿಗೆ ಅರ್ಪಿಸುತ್ತಿರುವ **"ಉಡುಪಿ ತಾಲೂಕಿನ ಕೊರಗ ಮಹಿಳೆಯರ ಅಭಿವೃಧಿಯ ಸಮಸ್ಯೆಗಳು"** ಎಂಬ ಎಂ.ಫಿಲ್. ಪ್ರಬಂಧವನ್ನು ಸಹನ ಎಸ್. ಇವರು ನನ್ನ ಮಾರ್ಗದರ್ಶನ ಮತ್ತು ಮೇಲ್ವಿಚಾರಣೆಯಲ್ಲಿ ಸಿದ್ಧಪಡಿಸಿದ್ದಾರೆಂದು ದೃಢೀಕರಿಸುತ್ತೇನೆ. ಈ ಮೊದಲು ಈ ಎಂ.ಫಿಲ್ ಪ್ರಬಂಧವನ್ನು ಭಾಗಶ:ವಾಗಿಯಾಗಲಿ, ಪೂರ್ಣವಾಗಿಯಾಗಲಿ ಯಾವುದೇ ವಿಶ್ವ ವಿದ್ಯಾನಿಲಯದ ಪದವಿ ಅಥವಾ ಡಿಪ್ಲೊಮಾ ಗಳಿಸಲು ಯಾವ ಭಾಷೆಯಲ್ಲೂ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ:

ಸ್ಥಳ: ಉಡುಪಿ

**ಡಾ. ದುಗ್ಗಪ್ಪ ಕಜೆಕಾರ್**

ಸಹಾಯಕ ಪ್ರಾಧ್ಯಾಪಕರು, ಸಮಾಜ ಕಾರ್ಯ ವಿಭಾಗ,

Dr. DUGGAPPA KAJEKAR
Co-ordinator
Departnment of P.G. Studies in Social Work
Govt. First Grade College
Thenkanidiyur, Udupi - 576 106

# ಅಭ್ಯರ್ಥಿಯ ದೃಢೀಕರಣಪತ್ರ

"ಉಡುಪಿ ತಾಲೂಕಿನ ಕೊರಗ ಮಹಿಳೆಯರ ಅಭಿವೃಧಿಯ ಸಮಸ್ಯೆಗಳು" ಎಂಬ ಪ್ರಬಂಧವನ್ನು ಡಾ. ದುಗ್ಗಪ್ಪ ಕಜೆಕಾರ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್ ಪದವಿಗಾಗಿ ಅಭಿವೃದ್ಧಿ ಅಧ್ಯಯನ ವಿಭಾಗಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಹಾಗೂ ಇದು ಬಿಡಿ ಇಲ್ಲವೇ ಇಡಿಯಾಗಿ ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ: ಉಡುಪಿ

ದಿನಾಂಕ:

Saha

ಸಹನ ಎಸ್.

# ವಿಷಯ ಸೂಚಿ

# ರೇಖಾಚಿತ್ರ ಮತ್ತು ಕೋಷ್ಟಕಗಳ ವಿವರ

## ಪೀಠಿಕೆ

### ಬುಡಕಟ್ಟು ಕಲ್ಪನೆ:

ಪರಿಶಿಷ್ಟ ಪಂಗಡಗಳು ಎಂಬುದು ಮೂಲಭೂತವಾಗಿ ಆಡಳಿತಾತ್ಮಕ ಅನೂಕೂಲತೆಗಾಗಿ ಸೃಷ್ಟಿಸಿದ ಪರಿಕಲ್ಪನೆಯಾಗಿದೆ. ಬ್ರಿಟಿಷರ ಆಡಳಿತ ಅವಧಿಯಲ್ಲಿ ನಿಯುಕ್ತಿಗೊಂಡಿದ್ದ ಸೈಮನ್ ಕಮಿಷನ್ ಎಂಬ ಸಮಿತಿಯು ೧೯೩೭ರಲ್ಲಿ ನೀಡಿದ ತನ್ನ ವರದಿಯಲ್ಲಿ ಇಲ್ಲಿನ ಮೂಲನಿವಾಸಿಗಳ ಬಗ್ಗೆ ಉಲ್ಲೇಖಿಸುವಾಗ ಮೊಟ್ಟಮೊದಲ ಬಾರಿಗೆ ಪರಿಚಯಿಸಿದ ಷೆಡ್ಯೂಲ್ಡ್ ಟ್ರೈಬ್ಸ್ ಎಂಬ ಪದವನ್ನು ಭಾರತ ಸರ್ಕಾರವು ಕೂಡ ಒಪ್ಪಿಕೊಂಡು ಬಳಸತೊಡಗಿದೆ.

ಭಾರತದ ಸಂವಿಧಾನದ ೩೪೨ನೇ ವಿಧಿಯ ಪ್ರಕಾರ ಭಾರತದ ರಾಷ್ಟ್ರಧ್ಯಾಕ್ಷರಿಂದ ಅಧಿಕೃತವಾಗಿ ಘೋಷಿಸಲ್ಪಟ್ಟು ಪಟ್ಟಿಮಾಡಲ್ಪಟ್ಟ ಆದಿವಾಸಿ ಸಮೂಹಗಳನ್ನು ಅಥವಾ ಪಂಗಡಗಳನ್ನು ಪರಿಶಿಷ್ಟ ಪಂಗಡಗಳು ಎಂದೆನ್ನಬಹುದಾಗಿದೆ.

### ವ್ಯಾಖ್ಯೆಗಳು

***ಡಾ. ಡಿ. ಎನ್. ಮಜುಮ್‌ದಾರ್***ರವರ ಪ್ರಕಾರ:- ಒಂದೇ ನಾಮದೇಯವನ್ನು ಹೊಂದಿರುವ ಒಂದೇ ಭೂನೆಲೆಯಲ್ಲಿ ವಾಸಿಸುವ ಒಂದೇ ಭಾಷೆಯನ್ನಾಡುವ ಮತ್ತು ವಿವಾಹ ಉದ್ಯೋಗಗಳಿಗೆ ಸಂಬಂಧಿಸಿದಂತೆ ಒಂದೇ ಬಗೆಯ ನಿಷೇಧಗಳಿಗೆ ಬದ್ಧವಾದ ಕುಟುಂಬಗಳ ಸಮೂಹವನ್ನು ಆದಿವಾಸಿ ಸಮೂಹ ಎಂದು ಕರೆಯಬಹುದು.

***ಭಾರತದ ಇಂಪೀರಿಯಲ್ ಗೆಜೆಟಿಯರ್***:- ಒಂದೇ ಹೆಸರನ್ನು ಹೊಂದಿರುವ ಒಂದೇ ಭಾಷೆಯನ್ನು ಮಾತನಾಡುವ,ಒಂದೇ ಸ್ಥಳದಲ್ಲಿ ವಾಸಮಾಡುವ ಅಥವಾ ವಾಸಿಸಲು ವಿದ್ಯುಕ್ತವಾಗಿರುವ ಈ ಮೊದಲು ಒಳಪಂಗಡ ವಿವಾಹ ಪದ್ಧತಿಗೆ ಬದ್ಧವಾಗಿರಬಹುದಾದರೂ ಈಗ ಹಾಗಿಲ್ಲದ ಕುಟುಂಬಗಳ ಸಮೂಹವನ್ನು ಆದಿವಾಸಿ ಸಮುದಾಯ ಎನ್ನಬಹುದು.

***ಜೆ. ಎಲ್. ಗಿಲಿನ್ ಮತ್ತು ಜೆ. ಎ. ಗಿಲಿನ್***ರವರ ಪ್ರಕಾರ:- ಒಂದು ಸ್ಥಳದಲ್ಲಿ ವಾಸಿಸುತ್ತಾ, ಒಂದೇ ಭಾಷೆಯನ್ನು ಮಾತನಾಡುವ ಮತ್ತು ಒಂದು ಸಂಸ್ಕೃತಿಯನ್ನು ಹೊಂದಿರುವ ಸ್ಥಳೀಯ ಸಮುದಾಯಗಳ ಸಮೂಹಕ್ಕೆ ಆದಿವಾಸಿ ಸಮಾಜ ಎನ್ನಬಹುದು.

***ಡಬ್ಲ್ಯೂ. ಜೆ. ಪೆರ್ರಿ***ರವರ ಪ್ರಕಾರ:- ಒಂದು ಸ್ಥಳದಲ್ಲಿ ನೆಲೆಸಿಕೊಂಡು ಒಂದೇ ಭಾಷೆಯನ್ನಾಡುವ ಜನಸಮೂಹವನ್ನು ಆದಿವಾಸಿ ಸಮೂಹ ಎಂದು ಕರೆಯಬಹುದು.

## ಆದಿವಾಸಿಗಳ ವಿವಿಧ ಹೆಸರುಗಳು(ಭಾರತದಲ್ಲಿ)

ಭಾರತದಲ್ಲಿ ಆದಿವಾಸಿಗಳನ್ನು ಎಬೊರಿಜಿನಲ್ಸ್ (ಮೂಲನಿವಾಸಿಗಳು) ಎಂದು ಕರೆದಿದ್ದರು. *ಸರ್. ಬೈನ್ಸ್* ಎಂಬ ಜನಗಣತಿ ಅಧಿಕಾರಿಯು ಈ ಸಮೂಹವನ್ನು "ಹಿಲ್ ಟ್ರೈಬ್ಸ್" ಎಂದು ಕರೆದಿದ್ದಾರೆ. *ಡಾ. ಘುರ್ಯೆ* ಪ್ರಕಾರ ಅವರುಗಳು "ಹಿಂದುಳಿದ ಹಿಂದುಗಳು". *ಡಾ. ದಾಸ್ ಮತ್ತು ದಾಸ್* ಪ್ರಕಾರ ಈ ಸಮುದಾಯವು ಒಂದು ಬಗೆಯ "ಮುಳುಗಿದ ಜನವರ್ಗ" ಎಂದು ಕರೆದಿದ್ದಾರೆ. ಮಹಾತ್ಮ ಗಾಂಧೀಜಿಯವರು ಈ ಸಮೂಹವನ್ನು "ಗಿರಿಜನರು" ಎಂದು ಕರೆದಿದ್ದಾರೆ. ಭಾರತದ ಸಂವಿಧಾನದ ೩೪೨ನೇ ಕಲಂನಲ್ಲಿ ಆದಿವಾಸಿಗಳನ್ನು "ಪರಿಶಿಷ್ಟ ಜನಾಂಗಗಳು" ಅಥವಾ "ಬುಡಕಟ್ಟುಗಳು" ಉಲ್ಲೇಖಿಸಲಾಗಿದೆ.

## ಬುಡಕಟ್ಟು ಸಂವಿಧಾನದ ಸವಲತ್ತುಗಳು:-

ಸ್ವತಂತ್ರ ಭಾರತ ಸರ್ಕಾರವು ದೇಶದ ಸಮಸ್ತ ಪ್ರಜೆಗಳನ್ನು ಸಮಾನವಾಗಿ ಕಾಣಲಿಚ್ಛಿಸುವುದಲ್ಲದೆ ಸಮಾಜದ ಎಲ್ಲಾ ವರ್ಗಗಳ ಕಲ್ಯಾಣದ ದೃಷ್ಟಿಯಿಂದ ಪರಿಶ್ರಮಿಸಲು ಬದ್ಧವಾಗಿದೆ. ಭಾರತದ ಸಂವಿಧಾನದಲ್ಲಿಯೂ ಕೂಡ ಸರ್ಕಾರದ ಈ ಬದ್ಧತೆಯನ್ನು ಒತ್ತಿ ಹೇಳುವ ಅಂಶಗಳಿವೆ. ಆದಿವಾಸಿಗಳ ಹಿತದೃಷ್ಟಿಯಿಂದ ಮತ್ತು ಅವರ ಕಲ್ಯಾಣವನ್ನು ಸಾಧಿಸುವ ದೃಷ್ಟಿಯಿಂದ ಸಂವಿಧಾನವು ಒಳಗೊಂಡಿರುವ ಹಲವಾರು ಅಂಶಗಳನ್ನು, ಅರ್ಥಾತ್ ಆದಿವಾಸಿಗಳಿಗೆ ನೀಡಲಾದ ಸಾಂವಿಧಾನಿಕ ಸವಲತ್ತುಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದು.

೧. ಸಂವಿಧಾನದ ೧೫ ನೇ ವಿಧಿಯ ಪ್ರಕಾರ ಜಾತಿ, ಜನಾಂಗ, ಮತ - ಪಂಥ, ಮತ - ಪಂಗಡಗಳೆಂಬ ಭೇಧವಿಲ್ಲದೆ ಆದಿವಾಸಿಗಳನ್ನೊಳಗೊಂಡಂತೆ ಎಲ್ಲರಿಗೂ ಸಮಾನವಕಾಶಗಳನ್ನು ನೀಡಲಾಗಿದೆ.
೨. ೧೬(೪) ಮತ್ತು ೩೨೦(೪) ವಿಧಿಗಳ ಪ್ರಕಾರ ಉದ್ಯೋಗಗಳಲ್ಲಿ ಆದಿವಾಸಿಗಳಿಗೆ ಸ್ಥಳವಕಾಶವನ್ನು ಕಾಯ್ದಿರಿಸಲಾಗಿದೆ.
೩. ೩೩೦, ೩೩೨ ಮತ್ತು ೩೩೪ನೇ ವಿಧಿಗಳ ಪ್ರಕಾರ ಶಾಸನ ಸಭೆಗಳಲ್ಲಿ ಆದಿವಾಸಿಗಳಿಗೆ ಕೆಲವು ಸ್ಥಾನಗಳನ್ನು ಮೀಸಲಿರಿಸಲಾಗಿದೆ.
೪. ೧೫(೪) ಮತ್ತು ೨೯(೨)ನೇ ವಿಧಿಗಳ ಪ್ರಕಾರ ಆಧಿವಾಸಿಗಳ ಶೈಕ್ಷಣಿಕ ಅಭಿವೃದ್ಧಿಯ ದೃಷ್ಟಿಯಿಂದ ರಾಜ್ಯವು ಅವರುಗಳಿಗೆ ಯಾವುದೇ ಅವಕಾಶಗಳನ್ನು ಕಲ್ಪಿಸಬಹುದಾಗಿದೆ.
೫. ೨೭೫ನೇ ವಿಧಿಯ ಪ್ರಕಾರ ಭಾರತದ ಸಂಚಿತನಿಧಿಯಿಂದ ಆದಿವಾಸಿಗಳ ಅಭಿವೃದ್ಧಿಗಾಗಿ ರಾಜ್ಯಗಳಿಗೆ ಆರ್ಥಿಕ ನೆರವನ್ನು ಕೇಂದ್ರವು ನೀಡಬಹುದಾಗಿದೆ.
೬. ೪೬ನೇ ವಿಧಿಯ ಪ್ರಕಾರ ಆಧಿವಾಸಿಗಳ ಆರ್ಥಿಕ ಮತ್ತು ಶೈಕ್ಷಣಿಕ ಆಸಕ್ತಿಗಳನ್ನು ಸಂರಕ್ಷಿಸುವ ಅಂಶಗಳನ್ನು ಒಳಗೊಂಡಿದೆ.
೭. ೩೩೮ ನೇ ವಿಧಿಯಂತೆ ಆದಿವಾಸಿಗಳ ಯೋಗಕ್ಷೇಮವನ್ನು ನೋಡಿಕೊಳ್ಳಲು ವಿಶೇಷ ಅಧಿಕಾರಿಗಳನ್ನು ನೇಮಿಸಬಹುದಾಗಿದೆ.
೮. ೩೩೯ ನೇ ವಿಧಿಯು ಪರಿಶಿಷ್ಟ ಪ್ರದೇಶಗಳ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣದ ವಿಷಯಗಳ ಬಗ್ಗೆ ಕೇಂದ್ರ ಸರ್ಕಾರದ ನಿಯಂತ್ರಣದ ಸ್ವರೂಪವು ಹೇಗಿರಬೇಕೆಂಬುದನ್ನು ತಿಳಿಸುವುದು.
೯. ೩೪೦ ನೇ ವಿಧಿಯ ಪ್ರಕಾರ ಆದಿವಾಸಿಗಳ ಹಿತಸಂರಕ್ಷಣೆಗೆ ಕಮಿಷನರ್ ಒಬ್ಬನನ್ನು ನೇಮಿಸಬಹುದು.

## ಕರ್ನಾಟಕ ವಿವಿಧ ಬುಡಕಟ್ಟುಗಳು

- ಕರ್ನಾಟಕದಲ್ಲಿ ಹಲವಾರು ಬುಡಕಟ್ಟು ಜನಾಂಗಗಳಲ್ಲಿ ಶಿವಮೊಗ್ಗ ಜಿಲ್ಲೆಯಲ್ಲಿನ ಹಕ್ಕಿಪಿಕ್ಕಿ ಬುಡಕಟ್ಟು.
- ಧಾರವಾಡ ಮತ್ತು ಹಾವೇರಿ ಜಿಲ್ಲೆಯಲ್ಲಿ -ಲಂಬಾಣಿ ಬುಡಕಟ್ಟು ಜನಾಂಗದವರಿದ್ದಾರೆ.
- ಬಿಳಿಗಿರಿರಂಗನಬೆಟ್ಟ ಪ್ರದೇಶದ ಸೋಲಿಗ ಬುಡಕಟ್ಟೂ ಸಮುದಾಯಗಳು
- ಉಡುಪಿ, ಮಂಗಳೂರಿನಲ್ಲಿ ಕಂಡುಬರುವ -ಕೊರಗ ಸಮುದಾಯಗಳು, ಮರಾಠಿ ಸಮುದಾಯಗಳು, ಕುಡುಬಿ ಸಮುದಾಯಗಳು
- ಉತ್ತರಕನ್ನಡ ಜಿಲ್ಲೆಯ ಮುಂಡುಗೋಡುನಲ್ಲಿರುವ - ಸಿದ್ಧಿ ಜನಾಂಗ
- ಕರ್ನಾಟಕದ ನಾಗರಹೊಳೆ ಅರಣ್ಯದೊಳಗೆ ಯರವ, ಬೆಟ್ಟಕುರುಬ, ಜೇನುಕುರುಬರು ವಾಸಿಸುತ್ತಿದ್ದಾರೆ.
- ದಕ್ಷಿಣಕನ್ನಡ ಜಿಲ್ಲೆಯಲ್ಲಿ ಕಂಡುಬರುವ ಮಲೆಕುಡಿಯ ಬುಡಕಟ್ಟು ಸಮುದಾಯಗಳು.

### ಕೊರಗ ಸಮುದಾಯ

ಅನೇಕತೆಯಲ್ಲಿ ಏಕತೆ ಭಾರತದ ವೈಶಿಷ್ಟ್ಯ ಇಲ್ಲಿನ ಆದಿವಾಸಿ ಬುಡಕಟ್ಟು, ಪಂಗಡಗಳು ಅನಾದಿಕಾಲದಿಂದಲೂ ಬೆಟ್ಟಗುಡ್ಡಗಳ ತಪ್ಪಲಿನಲ್ಲಿ ವಾಸವಾಗಿದ್ದರು. ಆದರೆ ಇಂದು ಆಧುನಿಕರಣ. ನಗರೀಕರಣ, ಕೈಗಾರಿಕರಣಗಳಿಂದಾಗಿ ಈ ವನವಾಸಿಗಳು ಸಂಕಷ್ಟದ ಹಾದಿಯಲ್ಲಿದ್ದಾರೆ.

ಕರ್ನಾಟಕದ ಕರಾವಳಿ ಜಿಲ್ಲೆಗಳು ಹಾಗೂ ಕಾಸರಗೋಡು ಜಿಲ್ಲೆಯ ಕೆಲವೆಡೆ ಅಲ್ಲಲ್ಲಿ ಹರಡಿರುವ ಇಂದಿಗೂ ಅನುಭವಿಸುತ್ತಿರುವುದು ಭಾರತದ ಸಾಮಾಜಿಕ ಸಮಸ್ಯೆಗಳಲ್ಲೊಂದಾಗಿದೆ. ಕೊರಗ ಜನಾಂಗವು ಅತ್ಯಂತ ಹಿಂದುಳಿದಿದ್ದು, ಇಂದಿಗೂ ಅಸ್ಪೃಶ್ಯರಿಗೂ ಅಸ್ಪೃಶ್ಯ ವರ್ಗವಾಗಿಯೇ ಉಳಿದಿದೆ. ೨೦೦೧ರ ಜನಗಣತಿಯ ಪ್ರಕಾರ ಈ ಜನಾಂಗದ ಜನಸಂಖ್ಯೆ ೧೫,೭೦೩ ಆಗಿವೆ.

ಗಿರಿಜನರಾಗಿರುವ ಇವರು ಪ್ರಕೃತಿ ಪ್ರೇಮಿಗಳು. ತಮ್ಮದೇ ಆದ ಜೀವನ ಪದ್ಧತಿಯನ್ನು ಹೊಂದಿರುವ ಈ ಕೊರಗರು ಸ್ವತಂತ್ರವಾದ ಭಾಷೆ, ಕಲೆ, ಸಂಸ್ಕೃತಿ ಹಾಗೂ ಕಸುಬನ್ನು ಮೈಗೂಡಿಸಿಕೊಂಡಿದ್ದಾರೆ. ಕಾಡಿನಿಂದ ಬಿಳಲು ತೆಗೆದು ಬುಟ್ಟಿ ಮಾಡುವುದು ಜೇನು ಸಂಗ್ರಹಿಸುವುದು ಇವರ ಕುಲಕಸುಬು. ಹಿರಿಯರಿಗೆ ಗೌರವ ಪ್ರಕೃತಿಯೊಡನೆ ಅನೋನ್ಯತೆ ಕೊರಗರ ಸಂಸ್ಕೃತಿ.

ದಕ್ಷಿಣಭಾರತದ ಅತ್ಯಂತ ಹಿಂದುಳಿದ ಜನವರ್ಗವಾಗಿ ಗುರುತಿಸಲ್ಪಟ್ಟಿರುವ ಕೊರಗರು ಒಂದು ಬುಡಕಟ್ಟುಗಿರಬೇಕಾದಂತಹ ಎಲ್ಲಾ ಲಕ್ಷಣ ಬಾಹ್ಯ ಸ್ವರೂಪಗಳನ್ನು ಹೊಂದಿರುವುದು ಮಾತ್ರವಲ್ಲದೆ ಮಾನವ ಶಾಸ್ತ್ರಜ್ಞರು ಯಾವುದೇ ಒಂದು ಬುಡಕಟ್ಟನ್ನು ನಿರ್ವಚಿಸುವುವಂತೆ ಈ ಜನಾಂಗವು ಅಲ್ಪಸಂಖ್ಯಾತ ರಕ್ತ ಸಂಬಂಧಿಗಳನ್ನು, ತನ್ನದೇ ಆದ ತಂಡ ಉಪತಂಡಗಳನ್ನು ನಿರ್ದಿಷ್ಟ ಭೌಗೋಳಿಕ ಪ್ರದೇಶವನ್ನು ಹಾಗೂ ಸ್ವಂತ ಭಾಷೆಯನ್ನು ಹೊಂದಿದ್ದಾರೆ. ಅವರು ಸಮಾಜದ ಮುಖ್ಯ ವಾಹಿನಿಯಿಂದ ಪ್ರತ್ಯೇಕವಾಗುವ ಮೂಲಕ ತಮ್ಮದೇ ಆದ ಆಚಾರವಿಚಾರ, ಸಂಪ್ರದಾಯ, ಸಂಸ್ಕಾರ, ಸಂಸ್ಕೃತಿ, ಸಾಮಾಜಿಕ ಪದ್ಧತಿ, ವೇಷಭೂಷಣ,

ಬದುಕುವ ಪರಿಯನ್ನು ರೂಡಿಸಿಕೊಂಡಿದ್ದಾರೆ. ಕೊರಗರು ತಮ್ಮನ್ನು ಇತರರಿಗಿಂತ ಭಿನ್ನವಾಗಿ ಗುರುತಿಸಿಕೊಂಡಿರುವ ಕಾರಣ ೧೯೫೬ರಲ್ಲಿ ಈ ಕೊರಗ ಸಮುದಾಯವನ್ನು ರಾಷ್ಟ್ರಪತಿಗಳ ಆದೇಶದಂತೆ ಪರಿಶಿಷ್ಟಪಂಗಡವೆಂದು ಘೋಷಿಸಲಾಯಿತು. ಆದರೆ ಹೀಗೆ ಘೋಷಣೆಯಾದ ನಂತರವೂ ಕೊರಗರು ಜೀತದ ಜೀವನದಿಂದ ಅಜಲ್ ಎಂಬ ಅನಿಷ್ಟ ಸಾಮಾಜಿಕ ಕಟ್ಟುಪಾಡಿನಿಂದ ಮತ್ತು ಬಡತನ ಕೂಪದಿಂದ ಮೇಲೆದ್ದು ಬರಲಿಲ್ಲ. ಕೊರಗ ಸಮುದಾಯದ ಕಷ್ಟಗಳ ಬಗ್ಗೆ ಕರುಣೆಯಿದ್ದ ಹಲವು ಪ್ರಗತಿಪರ ಚಿಂತಕರ ಸತತ ಪ್ರಯತ್ನ ಹಾಗೂ ಒತ್ತಡದಿಂದ ಕೇಂದ್ರ ಸರಕಾರವು ೧೯೮೬ ಸಾಲಿನಿಂದ ಕೊರಗರನ್ನು ದಕ್ಷಿಣ ಕನ್ನಡ ಜಿಲ್ಲೆಯ ಆದಿವಾಸಿ ಬುಡಕಟ್ಟು ಎಂದು ಘೋಷಿಸಿತು.

## ಕೊರಗ ಮಹಿಳೆಯರು

ಕೊರಗ ಮಹಿಳೆಯರನ್ನು ಉಡುಪಿ ತಾಲೂಕಿನಲ್ಲಿ ಕೊರತಿ/ಕೊರಪಳು ಎಂದು ಕರೆಯುತ್ತಾರೆ. ಈ ತಾಲೂಕಿನಲ್ಲಿಯೂ ಕೊರಗ ಮಹಿಳೆಯರು ಶಿಕ್ಷಣದಿಂದ ವಂಚಿತರಾಗಿದ್ದಾರೆ. ಬುಟ್ಟಿನೇಯುವುದು ಇವರ ಕುಲಕಸುಬಾಗಿದೆ. ಬಡತನದ ಕಾರಣದಿಂದಾಗಿ ಹೆಚ್ಚಿನವರು ತಮ್ಮ ಮಕ್ಕಳನ್ನು ಶಾಲೆಗೆ ಕಳಿಸುವುದಿಲ್ಲ. ಅವರಲ್ಲಿ ಒಳಪಂಗಡ ವಿವಾಹಕ್ಕೆ ಅವಕಾಶವಿಲ್ಲ. ಕೀಳರಿಮೆ ಕಾರಣದಿಂದಾಗಿ ಸ್ವಸಹಾಯ ಸಂಘಗಳಲ್ಲಿ ಪಾಲ್ಗೊಳ್ಳದೇ ಇರುವ ಕಾರಣ ಮಹಿಳೆಯರು ಯವುದೇ ರೀತಿಯ ಅಭಿವೃದ್ದಿಯನ್ನು ಹೊಂದಿಲ್ಲ. ಕಾರಣ ಶಿಕ್ಷಣದ ಕೊರತೆ ಇಂದು ನಾವು ೨೧ನೇ ಶತಮಾನದಲ್ಲಿದ್ದರೂ ಆಧುನಿಕ ಯುಗ, ಕಂಪ್ಯೂಟರ್ ಯುಗ ವೈಜ್ಞಾನಿಕ, ತಂತ್ರಜ್ಞಾನ ಯುಗವೆಂತೂ ನಾವೆಲ್ಲರೂ ಒಪ್ಪಿಕೊಂಡಿದ್ದೇವೆ.ಇಂತಹ ಯುಗದಲ್ಲಿ ಭಾರತದಂತಹ ಅಭಿವೃದ್ಧಿ ಶೀಲ ರಾಷ್ಟ್ರದಲ್ಲಿ ಹಾಗೂ ಶಿಕ್ಷಣದಲ್ಲಿ ಮುಂದುವರಿದ ದ.ಕ ಹಾಗೂ ಉಡುಪಿ ಜಿಲ್ಲೆಗಳಲ್ಲಿ ಶತಮಾನದಿಂದ ಕೇವಲ ೧೫,೭೦೩ ಜನಸಂಖ್ಯೆ ಹೊಂದಿದ ಕೊರಗ ಸಮುದಾಯದಲ್ಲಿ ಶಿಕ್ಷಣ ಮರೀಚಿಕೆಯಗಿರುವುದು ದೊಡ್ಡ ದುರಂತವೇ ಸರಿ.

ಇಂದು ಸಮುದಾಯದಲ್ಲಿ ಪದವೀಧರ ಸಂಖ್ಯೆ ಕೇವಲ ೩೦ ಮಾತ್ರ ಹಾಗೆಯೇ ಪ್ರಾಥಮಿಕ ತರಗತಿಯ ನಂತರ ಶಿಕ್ಷಣವನ್ನು ಮುಂದುವರಿಸುವರು ಕಂಡುಬರುವುದಿಲ್ಲ ಅಲ್ಲದೇ ಮದ್ಯದಲ್ಲಿಯೇ ಶಾಲೆ ಬಿಡುವತಂಹ ಡ್ರಾಫ್ ಔಟ್ ಸಮಸ್ಯೆಗಳು ಇದಕ್ಕೆ ಕಾರಣ. ತಮ್ಮದೇ ಆದ ಸಾಂಸ್ಕೃತಿಕ ಹಿನ್ನಲೆ, ಭಾಷೆ, ಮಾನಸಿಕ ಸ್ಥಿತಿ ಹೊಂದಿದ ಇವರು ಇತರ ಸಮುದಾಯಗಳಿಂದ ದೂರವಿದ್ದರು. ಇವರ ಮುಖ್ಯ ಕೆಲಸ ಬೆತ್ತ,ಬಿದಿರು ಬಿಳಲುಗಳಿಂದ ಬುಟ್ಟಿ ನೇಯುವುದು, ಬಿಳಲಿನಿಂದ ಕಲಾತ್ಮಕ ವಸ್ತುಗಳ ನೇಯ್ಗೆ, ತೊಟ್ಟಿಲು ತಯಾರಿಸುವುದು, ಮಲ್ಲಿಗೆ ಕೃಷಿ, ಕೃಷಿ ಜೇನು ಸಂಗ್ರಹಿಸುವುದು ಹಗ್ಗ ಮಾಡುವುದು, ಆಸ್ಪತ್ರೆಗಳಲ್ಲಿ ಕೆಲಸ ಮಾಡುವುದು ಮುನ್ಸಿಪಾಲಿಟಿಗಳಲ್ಲಿ ಕೆಲಸ ಮಾಡುವುದು ಇತ್ಯಾದಿ.

ಕರ್ನಾಟಕ ಕರಾವಳಿ ಜಿಲ್ಲೆಗಳಾದ ದಕ್ಷಿಣಕನ್ನಡ, ಉಡುಪಿ, ಉತ್ತರಕನ್ನಡ, ಮಲೆನಾಡಿನ ಶಿವಮೊಗ್ಗ, ಚಿಕ್ಕಮಗಳೂರು ಹಾಗೂ, ಕೇರಳದ ಕಾಸರಗೋಡು ಜಿಲ್ಲೆಗಳಲ್ಲಿ ಅಲ್ಲಲ್ಲಿ ಚದುರಿ ಹೋಗಿರುವ ಕೊರಗ ಜನಾಂಗವು ಬುಡಕಟ್ಟು ಸಮುದಾಯಕ್ಕೆ ಸೇರಿರುತ್ತದೆ.

ಚಾರಿತ್ರಿಕ ಹಿನ್ನಲೆಯ ಪ್ರಕಾರ ಕ್ರಿ.ಶ ಸುಮಾರು ೪೫೦ರಲ್ಲಿ ಕದಂಬವಂಶದ ಬಲಿಷ್ಟರಾಜ, ಜಾತಿಯಲ್ಲಿ ಬ್ರಾಹ್ಮಣನಾಗಿದ್ದ ಮಯೂರವರ್ಮನನ್ನು ಕೊರಗರ ಧೀಮಂತ ರಾಜನಾದ ಹುಭಾಶಿಕನ ನೇತೃತ್ವದಲ್ಲಿ ಸದೃಡ ಕೊರಗರ ಸೈನ್ಯವು ದಂಡೆತ್ತಿ ಹೋಗಿ ಅವರನ್ನು ಧೂಳಿಪಟ ಮಾಡಿತು. ಅದೇ ರೀತಿ ಮಂಜೇಶ್ವರದಲ್ಲಿ ಸುಮಾರು ೧೨ವರ್ಷಗಳಿಂದ ರಾಜ್ಯಾಭಾರ ನಡೆಸುತಿದ್ದಂತಹ ರಾಜಾ ಅಂಗರವರ್ಮನನ್ನು ಕೊರಗ

ಸೈನ್ಯವು ಸೋಲಿಸಿತು. ಅವರ ರಾಜ್ಯಗಳನ್ನು ವಶಪಡಿಸಿಕೊಂಡು ರಾಜ್ಯಾಭಾರ ನಡೆಸುತ್ತಿದ್ದ ಹುಭಾಶಿಕನ ಬಲಿಷ್ಟತೆಯನ್ನು ಸಹಿಸಿಕೊಳ್ಳದೆ ಜೊತೆಗೆ ಆತನನ್ನು ಸೋಲಿಸಲು ಶಕ್ತನಲ್ಲದ ಅಂಗರವರ್ಮ, ಹುಭಾಶಿಕನನ್ನು ಆಸ್ಥಾನಕ್ಕೆ ಬರಮಾಡಿಕೊಂಡು ಮೋಸದಿಂದ ಕೊಲೆ ಮಾಡುತ್ತಾನೆ. ನಂತರ ಆತನ ಸೈನಿಕರೆಲ್ಲರನ್ನು ಸೆರೆಹಿಡಿದು ಒತ್ತೆಯಾಳುಗಳನ್ನಾಗಿ ಮಾಡಿಕೊಂಡು ಅವರಿಗೆ ಹಲವಾರು ರೀತಿಯಲ್ಲಿ ಹಿಂಸೆನೀಡುತ್ತಾ ಸೇಡು ತೀರಿಸಿಕೊಂಡು ಅವರನ್ನು ವಿವಸ್ತ್ರಗೊಳಿಸಿ ಕಾಡಿಗೆ ಅಟ್ಟುತ್ತಾನೆ. ಜೊತೆಗೆ ಮಾನವ ಸಮಾಜದೊಂದಿಗೆ ಕೊರಗರು ಬೆರೆಯದಂತೆ ಹಲವಾರು ಸಾಮಾಜಿಕ ನಿಬಂಧನೆಗಳನ್ನು ಹೇರಲಾಯಿತು. ಆ ನಿಬಂಧನೇಗಳೇ ಮುಂದಿನ ದಿನಗಳಲ್ಲಿ ಘೋರ ಅಸ್ಪೃಶ್ಯತೆಯ ಆಚರಣೆಗೆ ಮೂಲ ಕಾರಣವಾಯಿತು ಹೀಗೆ ಕಾಡಿಗೆ ಅಟ್ಟಿದ ಕೊರಗರು ತಮ್ಮ ಮಾನ ಮುಚ್ಚಿಕೊಳ್ಳಲು ಮರದ ಎಲೆಗಳನ್ನು ಸುತ್ತಿಕೊಳ್ಳಲು ಮರದ ಎಲೆಗಳನ್ನು ಸುತ್ತಿಕೊಳ್ಳಬೇಕಾಯಿತು, ತಮ್ಮ ಜೀವನೋಪಾಯಕಾಗಿ ಗುಡ್ಡಗಾಡು ಪ್ರದೇಶದಲ್ಲಿ ದೊರೆಯುತ್ತಿದ್ದಂತಹ ಹಲವಾರು ರೀತಿಯ ಆಹಾರ,ಉಡುಗೆ ತೊಡುಗೆ ಕೆಲಸಕಾರ್ಯಗಳನ್ನು ಅನುಸರಿಸಬೇಕಾಯಿತು. ಸಾಮಾನ್ಯವಾಗಿ ಆದಿವಾಸಿ ಬುಡಕಟ್ಟು ಸಮುದಾಯಗಳು ಹೊಂದಿರುವ ದೈಹಿಕ ಲಕ್ಷಣಗಳನ್ನೇ ಕೊರಗ ಜನರು ಹೊಂದಿದ್ದಾರೆ. ಕಟ್ಟು ಮಸ್ತಾದ ಶರೀರ, ಅಗಲವಾದ ಹಣೆ, ದುಂಡಾಗಿರುವ ಮೂಗು, ದಪ್ಪ ತುಟಿಗಳು, ಗುಂಗುರು ಕೂದಲು,ಕಪ್ಪುಕಪ್ಪಾಗಿ ಹೊಳೆಯುವ ಚರ್ಮ ಇತ್ಯಾದಿ. ಕೊರಗರು ಆಹಾರಕ್ಕಾಗಿ ಕಾಡಿನ ಉತ್ಪನಗಳನ್ನೇ ಅವಲಂಬಿಸಿದ್ದರು. ಕಾಡಿನಲ್ಲಿ ಬೇಟೆಯಾಡಿ ಸಿಕ್ಕ ಪ್ರಾಣಿಗಳ ಮಾಂಸ ಬಳಸುತ್ತಿದ್ದರು,ಗೆಡ್ಡೆ ಗೆಣಸು, ಎಲೆಗಳನ್ನು ಸಂಗ್ರಹಿಸಿ ಆಹಾರಕ್ಕಾಗಿ ಬಳಸುತ್ತಿದ್ದರು.

ಕೊರಗ ಸಮುದಾಯವು ಮಾತೃಪರಂಪರೆಯ ಸಮುದಾಯ ಹೆಣ್ಣಿಗೆ ಪ್ರದಾನ ಆದ್ಯತೆ. ಹೆಣ್ಣುಹುಟ್ಟಿದರೆ ಅವರಲ್ಲಿ ಸಂಭ್ರಮ. ಪೀಳಿಗೆ ಕುಡಿ ಹೆಣ್ಣು ಎಂಬ ವಾಸ್ತವದ ಅರಿವು ಅವರಲ್ಲಿತ್ತು. ಮದುವೆಯೂ ಹೆಣ್ಣಿನ ಮನೆಯಲ್ಲೇ ನಡೆಯುತ್ತಿತ್ತು ಮತ್ತು ಮನೆಯ ಅಧಿಕಾರಗಳೆಲ್ಲಾ ಮಾತೃಮೂಲಕ್ಕೆ ವರ್ಗಾವಣೆಯಾಗುತ್ತಿತ್ತು. ಬಳಿಗಳ ಪರಿಕಲ್ಪನೆ ಅವರಲ್ಲಿದೆ ಅಂದರೆ ಒಂದೇ ಬಳಿಯವರು ರಕ್ತಸಂಬಂಧಿಗಳಾಗುತ್ತಾರೆ. ಮತ್ತು ಬಳಿಯೊಳಗಿನ ಮದುವೆ ನಿಷಿದ್ಧವಾಗಿದೆ. ಕೊರಗ ಸಮುದಾಯದಲ್ಲಿ ವಿಧವಾ ವಿವಾಹ ಹಾಗೂ ವಿಧುರ ವಿವಾಹ ಎರಡೂ ನಡೆಯಲು ಅವಕಾಶವಿದೆ.

ಕೊರಗರ ಅಭಿವೃದ್ಧಿ ಎಂದರೆ ಮಾನವ ಅಭಿವೃದ್ಧಿ ಎಲ್ಲಾ ಆಯಾಮಗಳನ್ನು ತೆರೆದುಕೊಳ್ಳುತ್ತದೆ. ಮನುಷ್ಯ-ಮನುಷ್ಯರ ನಡುವೆ ಸಂಬಂಧ ಕಲ್ಪಿಸಿದ ಅಸ್ಪೃಶ್ಯ ಜನಾಗವಾದ ಕೊರಗರಿಗೆ ಜಾತಿಪದ್ಧತಿ ಶಾಪವಾಗಿ ಪರಿಣಮಿಸಿದೆ. ಏಕೆಂದರೆ ಕೊರಗ ಅಭಿವೃದ್ಧಿಯನ್ನು ವ್ಯಾಖ್ಯಾನಿಸುವಾಗ ಅನೇಕ ಮಂದಿ ಸೀಮಿತ ಪರಿಧಿಯ ದೃಷ್ಟಿಯನ್ನಿಟ್ಟುಕೊಂಡು ಚಿಂತಿಸುತ್ತಾರೆ. ಮೊದಲೇ ವಿವರಿಸಿದಂತೆ ಕೊರಗರ ಅಭಿವೃದ್ದಿಯಲ್ಲಿ ವಿವಿಧ ಆಯಾಮಗಳ ನಡುವೆ ಒಂದು ಮತ್ತು ಸಕಾರಾತ್ಮಕ ಸಂವಹನ ಮಹತ್ವಕಾರಿ ಅಂಶಗಳಾಗುತ್ತದೆ. ಏಕೆಂದರೆ ಕೊರಗರ ಅಭಿವೃದ್ಧಿಯಲ್ಲಿ ಸಮಾಜದ ದೃಷ್ಟಿಕೋನ ಬದಲಾಗಬೇಕಿದೆ ಹೊರತು ಯಾವುದೇ ರೀತಿಯಲ್ಲಿ ಕನಿಕರ ಸಮಂಜಸವಲ್ಲ. ಮುಖ್ಯವಾಗಿ ಅಪೌಷ್ಟಿಕತೆ, ಶಿಕ್ಷಣ, ಆರೋಗ್ಯ, ಉದ್ಯೋಗದ ಭದ್ರತೆ, ಭೂಮಿ ಇತಾದಿ ಸಮಸ್ಯಗಳು ಕೊರಗರಲ್ಲಿನ ಮೂಲಭೂತ ಸಮಸ್ಯೆಗಳಾಗಿದೆ. ಕೊರಗರ ಅಭಿವೃದ್ಧಿಯಲ್ಲಿ ಸೂಕ್ತವಾದ ಮಾದರಿಯನ್ನು ಕಂಡುಕೊಳ್ಳಲು ಇದುವರೆಗೂ ಸಾಧ್ಯವಾಗಿಲ್ಲ.

ಕೊರಗ ಸಮುದಾಯದಲ್ಲಿ ವಿವಿಧ ಕ್ಷೇತ್ರದಲ್ಲಿ ಸಾಧನೆಗೈದವರು ಯು.ಜಿ.ಸಿ ಪರೀಕ್ಷೆ ಪಾಸ್ ಮಾಡಿದ ಸಬಿತಾ ಗುಂಡ್ಮಿ, ಇಂಗ್ಲೀಷಿನಲ್ಲಿ ಎಂ.ಎ. ಪಾಸಾದ ದೀಪಾ ಸಂತೆಕಟ್ಟೆ, ಕೃಷಿಯಲ್ಲಿ ಸಾಧನೆಗೈದ ದೋಗು, ಕುಲಕಸುಬು ಮಲ್ಲಿಗೆ ಕೃಷಿಯಲ್ಲಿ ಸಾಧನೆ ಮಾಡಿದ ಮಮತಾ, ಕಾರ್ಕಳದ ಉತ್ತಮ ಕೊಳಲುವಾದಕ ಹರೀಶ್, ಆರೋಗ್ಯ ಪ್ರೇರಕಿ ಬಾಗಿ ಬಂಟ್ವಾಳ, ಹೈನುಗಾರಿಕೆಯಲ್ಲಿ ಸಾಧಿಸಿದ ಗುಲಾಬಿ

ಹಾಲಾಡಿ. ಬೆತ್ತ, ಬಿದಿರು, ಬಿಳಲುಗಳಿಂದ ಬುಟ್ಟಿ,ಬಿಳಲಿನಿಂದ ಕಲಾತ್ಮಕ ವಸ್ತುಗಳ ನೇಯ್ಗೆ, ತೊಟ್ಟಿಲು ತಯಾರಿಸುವುದು, ಮಲ್ಲಿಗೆ ಕೃಷಿ, ಜೇನು ಸಂಗ್ರಹಿಸುವುದು, ಹಗ್ಗ ಮಾಡುವುದು, ಅಸ್ಪತ್ರೆಗಳಲ್ಲಿ ಕೆಲಸ ಮಾಡುವುದು.

ಮಣಿಸರ ಪ್ರಿಯರಾಗಿದ್ದ ಕೊರಗ ಮಹಿಳೆಯರು ಇತ್ತೀಚಿನ ದಿನಗಳಲ್ಲಿ ಉಳಿದವರಂತೆಯೇ ಫ್ಯಾಷನ್ ವಸ್ತುಗಳ ಖರೀದಿಯಲ್ಲಿ ಬದಲಾವಣೆ ಕಾಣುತ್ತಿದ್ದರೂ ಹಳೆಯ ತಲೆಮಾರುಗಳಲ್ಲಿ ಆ ಲಕ್ಷಣವನ್ನು ಇನ್ನೂ ಕೂಡಾ ಕಾಣಬಹುದಾಗಿದೆ. ಅಡಿಕೆ ಎಲೆ "ಹಾಳೆ"ಯಿಂದ ಮಾಡಿದ ಟೊಪ್ಪಿಯನ್ನು "ಮುಟ್ಟಾಲೆ" ಹಿಂದಿನವರು ಧರಿಸುತ್ತಿದ್ದರು. ಇವರು ತೊಡುವ ಉಡುಪುಗಳು, ಆಡುವ ಭಾಷೆಯ ಆಧಾರವಲ್ಲಿ ಇವರನ್ನು ಸೊಪ್ಪು ಕೊರಗರು, ಮುಂಡು ಕೊರಗರು, ಅಂಡೆ ಕೊರಗರು, ಚಿಪ್ಪಿ ಕೊರಗರು ಮತ್ತು ಬಾಕುಡೆ ಕೊರಗರು ಎಂದು ವಿಭಾಗಿಸಲಾಗಿತ್ತು.

ಮರಗಿಡಗಳ ಸೊಪ್ಪುಗಳನ್ನು ತೊಡುತ್ತಿದ್ದವರು ಸೊಪ್ಪು ಕೊರಗರೆಂದೂ, ಮೊಣಕಾಲಿನವರೆಗೆ ಮುಂಡನ್ನು ಧರಿಸುತ್ತಿದ್ದವರು ಮುಂಡು ಕೊರಗರೆಂದೂ, ಕೊರಳಿಗೆ ಬಿದಿರಿನ ಅಂಡೆಯನ್ನು ಕಟ್ಟಿ ನಡೆದಾಡುವವರು ಅಂಡೆ ಕೊರಗರೆಂದೂ, ತೆಂಗಿನ ಗೆರಟೆಯನ್ನು ಬೆನ್ನಿನ ಹತ್ತಿರ ಕಟ್ಟಿಕೊಳ್ಳುತ್ತಿದ್ದವರು ಚಿಪ್ಪಿ ಕೊರಗರೆಂದೂ, ಭಂಗಿ ವೃತ್ತಿ ಮಾಡುವವರು ಬಾಕುಡೆ ಕೊರಗ ಎಂದೂ ವಿಭಾಗಿಸಲ್ಪಟ್ಟಿರುವುದು. ಒಟ್ಟು ಸಮಾಜದ ಶೋಷಣೆಗೆ ಇವರು ಸಿಕ್ಕಿರುವುದನ್ನು ತಿಳಿಸುತ್ತದೆ. ಆದರೆ ಇತ್ತೀಚಿನ ದಿನಗಳಲ್ಲಿ ಈ ಮೇಲಿನ ಯಾವ ಲಕ್ಷಣಗಳಿಂದಲೂ ಈ ರೀತಿ ವರ್ಗೀಕರಿಸಲು ಸಾಧ್ಯವಾಗುವುದಿಲ್ಲ. ಆದರೆ ಅವರಾಡುವ ಭಾಷೆಯನ್ನು ಆಧರಿಸಿ ಅವರನ್ನೀಗ ಒಟಿಟಿ ಕೊರಗ, ಸೊಪ್ಪು ಕೊರಗ ಮತ್ತು ಬಾಕುಡ ಕೊರಗ ಎಂದು ವರ್ಗೀಕರಿಸಬಹುದಾಗಿದೆ.

ಈ ಮೊದಲೇ ತಿಳಿಸಿರುವಂತೆ ಮಾತೃ ಪ್ರಧಾನ ಕುಟುಂಬ ಸಂಬಂಧವನ್ನು ಹೊಂದಿರುವ ಕೊರಗರಲ್ಲಿ ಬಳಿ ಪದ್ಧತಿಗಳಿವೆ. ಈ ಬಳಿಯ ಆಧಾರದಲ್ಲಿ ವೈವಾಹಿಕ ಸಂಬಂಧಗಳು ಶ್ರೇಷ್ಠ, ಮಧ್ಯಮ, ಕೀಳು ಎಂದು ವ್ಯಕ್ತಿಗಳನ್ನು ವರ್ಗೀಕರಿಸುವ ವಿಧಾನವಿದೆ. ಸಾಮಾನ್ಯವಾಗಿ 'ಆದಿವಾಸಿ' ಎಂಬ ಶಬ್ಧವೇ ತಿಳಿಸುವಂತೆ ಇವರು ಕಾಡಿನ ಹತ್ತಿರದಲ್ಲಿ ಊರಿನಿಂದ, ಜನರಿಂದ ತುಂಬಾ ದೂರವಾಗಿ ವಾಸಿಸುತ್ತಾರೆ. ಇವರ ನೆರೆಕೆರೆಯೆಂದರೆ ಇವರದ್ದೇ ಮನೆಗಳು ಸಾಧಾರಣವಾಗಿ ಹಿಂದೆ ಎರಡು ಮಾಡಿನ ಮುಳಿಯ ಮನೆಯಾಗಿದ್ದರೆ ಈಗ ಹಂಚಿನ ಸಾಮಾನ್ಯ ಮನೆಗಳನ್ನು ಕಾಣಬಹುದು.

ಕೊರಗರು ಸೂರ್ಯದೇವನ ಆರಾಧಕರಾಗಿದ್ದು, ತಮ್ಮ ಮಕ್ಕಳಿಗೆ ದಿನಗಳ ಹೆಸರುನ್ನಿಡುವರು. ಅಲ್ಲದೆ ಪ್ರಾಣಿ, ನಿಸರ್ಗ ಇವರ ಜೀವನ ಕ್ರಮದೊಂದಿಗೆ ಬೆಸೆದುಕೊಂಡಿರುವುದರಿಂದ ಇವರು ನಿಸರ್ಗ ಸಂಬಂಧವಾದ ಹೆಸರುಗಳನ್ನು ಇಡುವರು. ಉದಾ:- ನಕ್ಕುರ(ಎರೆಹುಳು), ತಬುರ(ಕೆಂಪಿರುವೆ), ಬೊಗ್ಗುರ(ಗಂಡುನಾಯಿ), ಬೆಜಕ್ಕುರ(ತರಗೆಲೆ) ಎಂದೆಲ್ಲಾ ನಾಮಕರಣ ಮಾಡುತ್ತಾರೆ.

**ಕೊರಗರಿಗೆ ಐ.ಟಿ.ಡಿ.ಪಿ ಯಿಂದ/ಪಂಚಾಯತ್‌ನಿಂದ ಇರುವ ಸವಲತ್ತುಗಳು**

- ಸ್ವಯಂ ಉದ್ಯೋಗಕ್ಕೆ ಸಾಲ ನೀಡುವುದು
- ಮನೆ ಕಟ್ಟಲು ಸಾಲ ನೀಡುವುದು
- ಉಚಿತ ಕಂಪ್ಯೂಟರ್, ಸ್ಪರ್ಧಾತ್ಮಕ ಪರೀಕ್ಷೆಗಳ ತರಬೇತಿ ನೀಡುವುದು
- ಶಾಲಾ ಮಕ್ಕಳಿಗೆ ಉಚಿತವಾಗಿ ಶಿಕ್ಷಣ ನೀಡುವುದು
- ಸ್ಕಾಲಶಿಪ್ ನೀಡುವುದು
- ಉದ್ಯೋಗದಲ್ಲಿ, ರಾಜಕೀಯದಲ್ಲಿಮೀಸಲಾತಿ ಸೌಲಭ್ಯ.
- ನಿವೇಶನಗಳನ್ನು ಕಟ್ಟಿ ಕೊಡುವುದು.
- ನೀರಿನ ಸೌಲಭ್ಯ ಒದಗಿಸುವುದು.
- ಅವರು ವಾಸಿಸುತ್ತಿರುವ ಕಾಲೋನಿಗಳನ್ನು ಅಭಿವೃದ್ಧಿ ಪಡಿಸುವುದು ರಸ್ತೆಗಳಿಗೆ ಡಾಮರೀಕರಣ, ಶೌಚಲಯ ಕಟ್ಟಲು ಹಣಕಾಸಿನ ನೆರವು.

## ಕೊರಗ ಅಜಲು ಪದ್ಧತಿ

"ಅಜಲು" ಎಂಬ ಪದವನ್ನು "ಹಕ್ಕು", "ಹಕ್ಕಿನ ಪ್ರದೇಶ", "ಮೀಸಲು ಪ್ರದೇಶ", "ತುಂಡು", "ಭಾಗ" ಎಂಬುದಾಗಿ ಅರ್ಥೈಸಲಾಗಿದೆ. ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ ಉಡುಪಿ ಇವರ ತುಳು ನಿಘಂಟು - ಸಂಪುಟ ಒಂದರ ಪ್ರಕಾರ "ಅಜಲು" ಎಂದರೆ ಧಾರ್ಮಿಕ, ಸಾಮಾಜಿಕ ಆಚರಣೆಗಳಲ್ಲಿ ವಿಶಿಷ್ಟ ಕರ್ತವ್ಯಗಳನ್ನು ಮಾಡುವ ವಂಶ ಪಾರಂಪರ್ಯದಿಂದ ಬಂದ ಅಧಿಕಾರ ವಲಯ ಎಂದಿದೆ. ಅಜಲು ಎಂಬುದು ಸೇವಾ ನಿಬಂಧನಾ ಪ್ರದೇಶವಾಗಿದೆ. ಒಂದು ಪ್ರದೇಶದಲ್ಲಿ ನಿರ್ದಿಷ್ಟ ಪಂಗಡ ಯಾ ಗುಂಪಿನವರ ಸೇವೆಯ ಹಕ್ಕು ಅಥವಾ ಹೊಣೆಗಾರಿಕೆ.

**ಅಜಲು ಚಾಕ್ರಿಗಳು ಯಾವುವು?**
**ಸ್ವಚ್ಛತೆ**

ಅಜಲಿಗೆ ಸಂಬಂಧಪಟ್ಟ ಕೊರಗರಿಂದ ಊರಿನ ಸ್ವಚ್ಛತೆಯನ್ನು ಮಾಡಿಸಲಾಗುತ್ತದೆ. ಸತ್ತ ಪ್ರಾಣಿಗಳನ್ನು (ದನ, ನಾಯಿ,ಹಾವು ಇತ್ಯಾದಿ) ತೆಗೆಸುತ್ತಾರೆ. ಮದುವೆ ಮುಂತಾದ ಕಾರ್ಯಕ್ರಮಗಳಲ್ಲಿ ಊರವರು ಉಂಡು ಬಿಸಾಡಿದ ಎಂಜಲೆಲೆಯನ್ನು ಇವರಿಂದ ತೆಗೆಸುತ್ತಾರೆ. ಮೇಲ್ನೋಟಕ್ಕೆ ಈ ಎಲ್ಲಾ ಚಾಕ್ರಿಗಳು ಇತ್ತೀಚೆಗೆ ಕಡಿಮೆಯಾದಂತೆ ಕಂಡರೂ ಈಗಲೂ ಆಚರಣೆಯಲ್ಲಿವೆ. ಅದರ ವಿಧಾನ ಹಾಗೂ ಕ್ಷೇತ್ರಗಳು ಮಾತ್ರ ಬದಲಾಗಿದೆ. ಸತ್ತ ಪ್ರಾಣಿಗಳನ್ನು ಊರಿನ ಬದಲು ಗ್ರಾಮ ಪಂಚಾಯತಿಗಳ ಮೂಲಕ, ಉದ್ಯೋಗದ ಹೆಸರಿನಲ್ಲಿ ತೆಗೆಸುತ್ತಾರೆ. ಸಮಾರಂಭದ ಬದಲಿಗೆ ಹೋಟೆಲುಗಳಲ್ಲಿ ಎಂಜಲು ತೆಗೆಸುವ ಕೆಲಸ ಮಾಡಿಸುತ್ತಾರೆ. ಹೋಟೆಲ್‌ಗಳ ಕಕ್ಕಸು, ಮೆಟ್ಟಿಲುಗಳಲ್ಲಿ ಕೊರಗ ಯುವಕರ ತಾಕತ್ತುಗಳಿಗೆ ಬೆಲೆ ಕಟ್ಟುತ್ತಾರೆ. ಕೊರಗರೂ, ತಾವು ಇದಕ್ಕೇ ಲಾಯಕ್ಕು ಎನ್ನುವ ಧೋರಣೆಯನ್ನು ಬೆಳೆಸಿಕೊಳ್ಳುವಂತೆ ಈ ಅಜಲು ತರಬೇತುಗೊಳಿಸಿದೆ. ಇಲ್ಲಿ

ಕೊರಗರು ಸ್ವಚ್ಛತೆಯ ಕೆಲಸಗಳನ್ನೇ ಯಾಕೆ ನಿರ್ವಹಿಸಬೇಕು? ಎನ್ನುವುದಕ್ಕೆ ಸಾರ್ವಜನಿಕರು ಪ್ರತಿಕ್ರಿಯಿಸಬೇಕಾಗಿದೆ.

**ಅನಿಷ್ಟ ಹೊರುವುದು**

ಊರಿನ ಅನಿಷ್ಟಗಳನ್ನೆಲ್ಲಾ ಕೊರಗರ ಮೇಲೆ ಹೇರುವುದು ಬಹಳ ಸುಲಭ. ಊರಿನ ಧಣಿಗಳ ಬೆದರಿಕೆಯ ಘರ್ಜನೆಗೆ ನಲುಗಿರುವ ಕೊರಗರು ಮರುಮಾತಾಡದೆ ಎಲ್ಲವನ್ನು ತಮ್ಮದೆಂದು ಸ್ವೀಕರಿಸುತ್ತಾರೆ. ಅಷ್ಟೋ ರಾತ್ರಿ ಊರಿನ ಮಾರಿಯನ್ನು ಓಡಿಸಲೂ ಮುಂದಾಗುತ್ತಾರೆ. ಪಂಚಮದಾನದೊಂದಿಗೆ ಊರವರ ಕಾಯಿಲೆಯನ್ನು ತಮಗೆ ವರ್ಗಾಯಿಸಿಕೊಳ್ಳಲೂ ಅಂಜುವುದಿಲ್ಲ. ಕಂಬಳದ "ಪನಿಯಲ್ಲಿ" ಕುಡಿದು ಬೇಕಾಬಿಟ್ಟಿ ಕುಣಿಯಲೂ ಹೇಸುವುದಿಲ್ಲ.

**ಪಂಚಮ ದಾನ**

ಹಿಂದೂ ಜಾತಿ ಪದ್ಧತಿಯ ಚತುವರ್ಣಗಳಲ್ಲಿ ಕೊರಗರು ಸೇರದಿರುವುದರಿಂದ ಅವರನ್ನು "ಪಂಚಮರು" ಎಂದು ಆರೋಪಿಸಲಾಗಿದೆ. ಊರಲ್ಲಿ ಯಾರಾದರೂ ಕಾಯಿಲೆಗೆ ಬಿದ್ದಾಗ ಜ್ಯೋತಿಷ್ಯರ(ಬಲಿಮೆಯವರ) ಆದೇಶದಂತೆ ಕೊರಗರಿಗೆ ಈ ಪಂಚಮ ದಾನವನ್ನು ನೀಡಲಾಗುತ್ತದೆ. ರೋಗಿಯನ್ನು ಅಂಗಳದಲ್ಲಿ ಪೂರ್ವಾಭಿಮುಖವಾಗಿ ಕುಳ್ಳಿರಿಸಿ ಆತನ ಎದುರು ಗೆರಸೆಯಲ್ಲಿ ಬಾಳೆ ಎಲೆಯನ್ನು ಹಾಕಿ, ಅರೆಬೆಂದ ಅನ್ನವನ್ನು ಬಡಿಸುತ್ತಾರೆ. ಅದಕ್ಕೆ ಬೂದುಕುಂಬಳದ ನೀರು ಸಾರನ್ನು ಸುರಿದ ಬಳಿಕ, ರೋಗಿಯ ಕೆಲವು ತಲೆಕೂದಲು ಹಾಗೂ ಉಗುರುಗಳನ್ನು ಕತ್ತರಿಸಿ ಅನ್ನಕ್ಕೆ ಬೆರೆಸುತ್ತಾರೆ. ಕೊನೆಗೆ ದಾನ ಪಡೆಯುವುದಕ್ಕಾಗಿ ಕರೆಸಲಾದ ಕೊರಗ ಹೆಂಗಸು ಅಂಗಳಕ್ಕೆ ಬಂದು, ಅನ್ನ ಸಮೇತ ಗೆರಸೆಯನ್ನು ಎತ್ತಿ ರೋಗಿಯ ತಲೆಗೆ ನಿವಾಳಿಸಿ, ಅದನ್ನು ತನ್ನ ವಶಕ್ಕೆ ಪಡೆಯುತ್ತಾಳೆ. ಜೊತೆಗೆ ಆ ಹೆಂಗಸಿನ ತಲೆಗೆ ಎಣ್ಣೆಯನ್ನು ಸುರಿಯುತ್ತಾರೆ. ರೋಗಿಯ ಚಿಂದಿ ಬಟ್ಟೆಗಳನ್ನು ಆಕೆಗೆ ಕೊಡುತ್ತಾರೆ. ಇಲ್ಲಿ ಜನರ ನಂಬಿಕೆಯಂತೆ ರೋಗಿಯ ಕಾಯಿಲೆಯನ್ನು ಆ ಹೆಂಗಸಿಗೆ ವರ್ಗಾಯಿಸುವುದಾಗಿದೆ. ಆದರೆ ಅನ್ನ, ಬಟ್ಟೆ,ಎಣ್ಣೆ ಇತ್ಯಾದಿಗಳನ್ನು ದಾನವಾಗಿ ನೀಡುವುದರೊಂದಿಗೆ ಆ ನಂಬಿಕೆಯನ್ನು ಬಹಳ ನಾಜೂಕಾಗಿಯೇ ಬಳಸಿಕೊಳ್ಳಲಾಗಿದೆ. ಅದರ ವಿಮರ್ಶೆಯ ಗೋಜಿಗೇ ಹೋಗದ ಕೊರಗರು ಇಲ್ಲಿ ಬಲಿಪಶುಗಳು.

ಇಲ್ಲಿ ಗಂಭೀರವಾಗಿ ಚಿಂತಿಸಬೇಕಾದ ವಿಷಯವೇನೆಂದರೆ, ಮಾನವ ದೇಹದ ಕಶ್ಮಲಗಳಾದ ತಲೆಕೂದಲು, ಉಗುರುಗಳನ್ನು ಪ್ರಜ್ಞೆಗ ಇರುವ ಯಾರೊಬ್ಬನೂ ತನ್ನ ಮನೆಯೊಳಗೆ ತಪ್ಪಿಯೂ ಇರಗೊಡಲಾರನು. ಆದರೆ ಕೊರಗರು ಉಣ್ಣಬೇಕಾದ ಅನ್ನಕ್ಕೆ ಅವುಗಳನ್ನು ಹಾಕುತ್ತಾರೆ. ಇದು ಊರವರು ಕೊರಗರೊಂದಿಗೆ ವರ್ತಿಸುವ ರೀತಿಯಾಗಿದೆ.ಇಲ್ಲಿ ಕೊರಗರನ್ನು ಮನುಷ್ಯರೇ "ಅಲ್ಲ" ಎನ್ನುವಂತೆ ನಡೆಸಿಕೊಳ್ಳುವ ಜನರು, ತಮ್ಮ ಕ್ರೂರ ಮುಖವನ್ನು ಬಹಿರಂಗಪಡಿಸುತ್ತಾರೆ.

ರೋಗಿಗಳು ಸಣ್ಣ ಮಕ್ಕಳಾದಲ್ಲಿ ಕೊರಗ ಮಹಿಳೆಯ ಎದೆಹಾಲನ್ನು ಕುಡಿಸಲಾಗುತ್ತದೆ. ಹಾಗೂ ಆಕೆಯಿಂದ ಮರುನಾಮಕರಣ ಮಾಡಿಸಲಾಗುತ್ತದೆ. ಕಾಯಿಲೆ ವಾಸಿಯಾಗಲು ಕೊರಗರ ಜಾತಿ, ಕುಲ, ಯಾವುದೂ ಅಡ್ಡಿಯಾಗುವುದಿಲ್ಲ. ಆದರೆ ಮಗುವನ್ನು ಮನೆಯೊಳಗೆ ಸೇರಿಸಿಕೊಳ್ಳುವುದಕ್ಕೆ ಮೊದಲು ತಣ್ಣೀರಿನಿಂದ ಸ್ನಾನ ಮಾಡಿಸುತ್ತಾರೆ. ಯಾಕೆಂದರೆ ನಂತರ ಕೊರಗರು ಮುಟ್ಟಿದ ಮಗುವು ಮೈಲಿಗೆಯಾಗಿರುತ್ತದೆ.

## ಮಾರಿ

ಊರಿನ ಮಾರಿ ಎಂದರೆ ಅನಿಷ್ಟ ಪೀಡೆಗಳನ್ನು ಊರಿನಿಂದ ಹೊರಗೆ ಓಡಿಸುವ ಹಬ್ಬ. ಊರಿಗೆ ಗಂಡಾಂತರಗಳು ಬಾರದಂತೆ ಭೂತಾದಿ ಗಣಗಳನ್ನು ಸಂತೃಪ್ತಿಪಡಿಸುವ ಕಾರ್ಯವಾಗಿದೆ. ಮಾರಿ ಓಡಿಸುವಾಗ ಕೊರಗರು ಎಲ್ಲರಿಗಿಂತಲೂ ಮುಂದೆ ಡೋಲು ಬಾರಿಸುತ್ತಾ ಓಡಬೇಕಾಗುತ್ತದೆ. ಕೆಲವೊಮ್ಮೆ ೨-೩ ಕಿಲೋಮೀಟರ್‌ಗಳಷ್ಟು ದೂರದವರೆಗೂ ಓಡಬೇಕಾಗುವುದು. ಕೊರಗರ ಡೋಲಿನ ಧ್ವನಿಗೆ ಅಲೌಕಿಕ ದುಷ್ಟಶಕ್ತಿಗಳು ದೂರಸರಿಯುತ್ತವೆ ಎಂಬ ನಂಬಿಕೆ(ಆರೋಪ)ಯಿದೆ. ವಾಸ್ತವವಾಗಿ, ಹಿಂದಿನ ಕಾಲದಲ್ಲಿ ಕಾಡುಗಳೇ ಹೆಚ್ಚಾಗಿದ್ದಾಗ, ರಾತ್ರಿ ವೇಳೆ ಕಾಡುಪ್ರಾಣಿಗಳ ಭಯವಿದ್ದಿರಬೇಕು. ಕೊರಗರು ಡೋಲು ಬಾರಿಸುತ್ತಾ ಮುಂದಿನಿಂದ ಹೋದರೆ ಹಿಂದಿನಿಂದ ಬರುವ ಜನರು ಸುರಕ್ಷಿತವಾಗಿರುತ್ತಾರೆ. ತಮ್ಮ ಸುರಕ್ಷತೆಗಾಗಿ ಕೊರಗರ ಡೋಲಿಗೆ ಬ್ಲ್ಯಾಕ್ ಮ್ಯಾಜಿಕ್‌ನ ಆರೋಪ ಹೊರಿಸಲಾಗಿದೆ. ಇದನ್ನು ಮುಗ್ಧ ಕೊರಗರು ನಂಬಿದ್ದರು. ಮಾರಿಗೆ ಅನ್ನ ಬಡಿಸುವ "ಗಡು" ಸ್ಥಳವನ್ನು ತಲುಪಿದ ಕೂಡಲೇ ಕೊರಗರು ದೂರ ಸರಿದು ನಿಲ್ಲಬೇಕು. ಏಕೆಂದರೆ ಮಾರಿಗೂ ಕೊರಗರು ಅಸ್ಪೃಶ್ಯರು.

(ಗಣ ಭೂತ?)ಗಳಿಗೆ ಬಡಿಸಿದ ಅನ್ನಕ್ಕೆ ಕೋಳಿ ಕೊಯ್ದು ರಕ್ತವನ್ನು ಹರಿಯಬಿಡುತ್ತಾರೆ. ಮಳೆಗಾಲವಾದರೆ ಅದರ ಮೇಲೆಯೇ ನೀರು ಹರಿದು ಹೋಗುತ್ತದೆ. (ಹೆಚ್ಚಾಗಿ ಮಾರಿಗಳು ಮಳೆಗಾಲದಲ್ಲಿಯೇ ನಡೆಯುತ್ತವೆ). ಕೊನೆಗೆ ಅದೇ ಕಲ್ಲು ಮಿಶ್ರಿತ, ಅರೆಬೆಂದ, ರಕ್ತಪೂರಿತ ಅನ್ನವನ್ನು ದೇವರ ಪ್ರಸಾದವೆಂದೂ ಕೊರಗರು ಪಡೆಯಬೇಕು. ದಿನವಿಡೀ ನಾಲ್ಕು ಜನ ಕೊರಗರು ಡೋಲಿನೊಂದಿಗೆ ಒದ್ದಾಡಿರುವುದಕ್ಕೆ ಅವರಿಗೆ ದೊರೆಯುವ ಪ್ರತಿಫಲವಿದು!

## ಕಂಬಳದ ಪನಿ

ಕಂಬಳದ ಹಿಂದಿನ ರಾತ್ರಿ ಅಜಲಿನ ಕೊರಗರು ತಮ್ಮ ನೆಂಟರಿಷ್ಟರೊಂದಿಗೆ ಸೇರಿ, ರಾತ್ರಿಯಿಡೀ ಜಾಗರಣೆ ಇದ್ದು, ಕಂಬಳ ನಡೆಯುವ ಗದ್ದೆಯನ್ನು ಕಾಯಬೇಕು. ಅಲೌಕಿಕವಾದ ದುಷ್ಟಪೀಡೆಗಳು ಗದ್ದೆಯನ್ನು ಪ್ರವೇಶಿಸದಂತೆ ಮಾಡುವುದೇ ಇದರ ಉದ್ದೇಶ. ಹೀಗೆ ಜಾಗರಣೆ ಇದ್ದು ಡೋಲು ಬಾರಿಸುತ್ತಿರುವಾಗ ಅವರು ಅನಿವಾರ್ಯವಾಗಿ ಕುಡಿತಕ್ಕೆ ಮೊರೆ ಹೋಗುತ್ತಾರೆ. ಇಲ್ಲಿ ಕೊರಗರನ್ನು ವಿಚಾರಿಸಲು ಯಾರೊಬ್ಬರೂ ಹೋಗುವುದಿಲ್ಲ. ಸಮಯ ಕಳೆಯುವುದಕ್ಕಾಗಿ ಕೆಲವರು ಕುಣಿಯುತ್ತಾರೆ. ಜೊತೆಗೆ ಅಶ್ಲೀಲತನವನ್ನು ನಟಿಸುತ್ತಾರೆ. ಇದನ್ನು ಕೊರಗರ ಸಂಸ್ಕೃತಿಯೆಂದು ವೈಭವೀಕರಿಸುವ ಕೆಲವು ಬರಹಗಾರರು ಕೊರಗರೊಂದಿಗೆ ಕೆಲವು ಕ್ಷಣ ಇದ್ದು ಅವರ ಅನುಭವಗಳನ್ನು ಹಂಚಿಕೊಂಡರೆ ವಾಸ್ತವತೆಯ ಕರಾಳರೂಪ ದರ್ಶನವಾದೀತು. ಕೆಲವು ಕಡೆ ಕಂಬಳದ ದಿನ ಕೋಣಗಳು ಗದ್ದೆಗೆ ಇಳಿಯುವ ಮೊದಲು ಕೊರಗ ಯುವಕರನ್ನು ಗದ್ದೆಯಲ್ಲಿ ಕೋಣಗಳಂತೆ ಓಡಿಸುತ್ತಾರೆ. ನೀರು ತುಂಬಿದ ಕೆಸರು ಗದ್ದೆಯಲ್ಲಿ ಮುದ್ದಿನ ಕೋಣಗಳನ್ನು ಓಡಿಸಲು ಯಾವುದೇ ಆತಂಕಗಳಿಲ್ಲ ಎಂದು ಅಂತಿಮವಾಗಿ ಖಾತ್ರಿಪಡಿಸಿಕೊಳ್ಳುವುದೇ ಇದರ ಹಿಂದಿರುವ ಉದ್ದೇಶವಾಗಿದೆ. ಗದ್ದೆಯಲ್ಲಿ ವಿರೋಧಿಗಳು ಎಲ್ಲಿಯಾದರೂ ಗಾಜಿನ ಚೂರುಗಳನ್ನು ಹಾಕಿದ್ದರೆ ಅಥವಾ ಗದ್ದೆಗೆ ಹಾಕಿದ ಗೊಬ್ಬರದಲ್ಲಿ ಕಸಕಡ್ಡಿಗಳೇನಾದರೂ ಇದ್ದರೆ ಹಾಗೂ ಕೆಸರು ಗದ್ದೆಯಲ್ಲಿ ಹೊಂಡಗಳೇನಾದರೂ ಇದ್ದಲ್ಲಿ ಅದರ ಅಪಾಯವು ಮುದ್ದಿನಿಂದ ಸಾಕಿದ ಕೋಣಗಳಿಗೆ ಬರಬಾರದಲ್ಲವೇ?! ಕೊರಗರ ಕಾಲಿಗೆ ತಾಗಿದರೂ ಆತ ಯಾರೊಂದಿಗೂ ಹೇಳಿಕೊಳ್ಳಲಾರ.

## ಅಜಲು ಚಾಕ್ರಿ ಆಚರಣೆಯ ಪರಿಣಾಮಗಳು
### ಸಾಮಾಜಿಕ ಕೀಳರಿಮೆ

ಶತಮಾನಗಳಿಂದ ಈ ಅಜಲು ಎಂಬ ವ್ಯವಸ್ಥೆಯಲ್ಲಿ ಶೋಷಣೆಗೊಳಪಟ್ಟ ಈ ಜನಾಂಗವು ಇಂದು ಸಾಮಾಜಿಕ ಕೀಳರಿಮೆಯನ್ನು ಮೈಗೂಡಿಸಿಕೊಂಡಿದೆ. ಸಮಾಜದಲ್ಲಿ ತಾನು ತಲೆಯೆತ್ತಿ ನಡೆಯಲಾಗದವನು ಎಂಬ ಅವ್ಯಕ್ತ ಭಾವನೆ ಈ ಕೆಲಸ ನಿರ್ವಹಿಸುವ ಕೊರಗರಲ್ಲಿ ಅಂತರ್ಗತವಾಗಿರುತ್ತದೆ. ಊರಿನ ಅನಿಷ್ಟಗಳನ್ನು ಹೊರವುದು, ನೈರ್ಮಲ್ಯದ ಕೆಲಸಗಳನ್ನು ನಿರ್ವಹಿಸುವುದು ಹಾಗೂ ಊರವರಿಗೆ ವಿಧೇಯನಾಗಿರುವುದೇ ತನ್ನ ದರ್ಮ ಎಂಬ ವಿಚಾರಗಳು ಆತನ ರಕ್ತದ ಕಣಕಣಗಳಲ್ಲೂ ಬೆರೆತು ಹೋಗಿದೆ. ಅಜಲಿನಿಂದ ಹೊರಪ್ರಪಂಚದ ಬಗ್ಗೆ ಆಲೋಚಿಸುವುದಕ್ಕೂ ಅವಕಾಶ ನೀಡದ ಸಮಾಜ ಇವರನ್ನು ಬದಲಾವಣೆಗಳಿಗೆ ಒಗ್ಗದಂತೆ ತರಬೇತುಗೊಳಿಸಿದೆ. ಆದುದರಿಂದ ಮಂದಗತಿಗಳಂತೆ ವರ್ತಿಸುವ ಕೊರಗರು ಇಂದು ಯಾವ ಸರಕಾರದಿಂದಲೂ ಬದಲಾವಣೆಗೆ ಸಾಧ್ಯವಾಗದ ಸ್ಥಿತಿಗೆ ತಲುಪಿದ್ದಾರೆ.

### ಮೂಢನಂಬಿಕೆಗಳು

ಅಜಲಿನ ಕೆಲಸಗಳಿಂದಾಗಿ ಕೊರಗರು ಈ ನಂಬಿಕೆಗಳಿಂದ ಬಿಡಿಸಿಕೊಳ್ಳಲಾಗದ ಹಂತವನ್ನು ತಲುಪಿದ್ದಾರೆ. ತಮಗೆ ಕಾಯಿಲೆಗಳು ಬಂದರೆ ಕಾಯಿಲೆಗೆ ನಿಜವಾದ ಕಾರಣ ಏನಿದ್ದರೂ, ಯಾವುದೋ ಭೂತದ ಸೇವೆ ಬಾಕಿಯಿರುವುದು ಅಥವಾ ಯಾರೋ ಮಾಟ ಮಾಡಿರುವುದು ಎಂದು ನಂಬುತ್ತಾರೆ.

### ಗುಲಾಮಿತನ – ದಾಸ್ಯ ಪ್ರವೃತ್ತಿ

ಸ್ವತಂತ್ರ ಭಾರತವು ಅರವತ್ತೈದು ವರ್ಷಗಳನ್ನೂ ಪೂರೈಸಿದ್ದರೂ ಹದಿನೇಳನೇ ಶತಮಾನದ ಊಳಿಗಮಾನ್ಯ ಪದ್ಧತಿಯನ್ನು ಅಜಲಿನ ಕೊರಗರು ಅನುಭವಿಸುತ್ತಾರೆ. ದೈವ ದೇವರುಗಳ ಹೆದರಿಕೆಗಳಿಂದಾಗಿ ಇವರು ಅನಿವಾರ್ಯವಾಗಿ ದಾಸ್ಯ ಪ್ರವೃತ್ತಿಯನ್ನು ಒಪ್ಪಿಕೊಂಡಿದ್ದಾರೆ.

### ಶಿಕ್ಷಣದ ಸಮಸ್ಯೆ

ಈ ಅಜಲು ಪದ್ಧತಿಯಿಂದಾಗಿ ಕೊರಗರು ಶಾಲೆಯ ಶಿಕ್ಷಣ ಕುರಿತು ಆಲೋಚಿಸುವುದಕ್ಕೂ ಸಾಧ್ಯವಿಲ್ಲ. ಪರಿಣಾಮವಾಗಿ ಪ್ರಾಥಮಿಕ ಶಿಕ್ಷಣ ಪಡೆಯುವುದಕ್ಕೂ ಕೊರಗ ಮಕ್ಕಳು ಪರದಾಡಬೇಕಾಗುತ್ತದೆ. ನೂರಕ್ಕೆ ಒಂದೆರಡು ಮಕ್ಕಳು ಹತ್ತನೇ ತರಗತಿ ದಾಟುವುದು ಸಾಧ್ಯವಾಗುತ್ತಿಲ್ಲ.

### ಅನಾರೋಗ್ಯ

ಅಜಲು ಚಾಕ್ರಿ ನಿರ್ವಹಿಸುವ ಪ್ರತಿಯೊಬ್ಬ ಕೊರಗನು ಅನಾರೋಗ್ಯದಿಂದ ಬಳಲುತ್ತಿದ್ದಾನೆ. ಆಹಾರ, ಸಿದ್ದೆ ಕಡೆಗಣಿಸಿ ಕಡ್ಡಾಯವಾಗಿ ಮಾಡಲೇಬೇಕಾದ ಚಾಕ್ರಿಯಲ್ಲಿ ಆರೋಗ್ಯದ ಬಗ್ಗೆ ಯಾವುದೇ ಭರವಸೆ ಇರುವುದಿಲ್ಲ. ಬದಲಾಗಿ ಇದು ಕುಡಿತ ಮುಂತಾದ ಕೆಟ್ಟ ಚಟಗಳನ್ನು ಪ್ರೇರೇಪಿಸುತ್ತದೆ. ಪರಿಣಾಮವಾಗಿ ಕ್ಷಯ, ರಕ್ತಹೀನತೆಯಂತಹ ಮಾರಕ ರೋಗಗಳು ಈ ಸಮುದಾಯದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಇವರಿಗೆ ವೈಯಕ್ತಿಕ ನೈರ್ಮಲ್ಯಗಳೂ ಅಗತ್ಯವೆನಿಸುವುದಿಲ್ಲ.

## ಆರ್ಥಿಕ ಮುಗ್ಗಟ್ಟು

ಅಜಲು ಚಾಕ್ರಿ ಮಾಡುವ ಕೊರಗರು ಅತಿಯಾದ ಆರ್ಥಿಕ ಮುಗ್ಗಟ್ಟನ್ನು ಎದುರಿಸುತ್ತಾರೆ. ಚಾಕ್ರಿಯು ಉಚಿತ ಸೇವೆಯಾಗಿದ್ದು ಯಾವುದೇ ಮೂಲದಿಂದ ಸಂಪಾದನೆ ಅಸಾಧ್ಯವಾಗಿರುತ್ತದೆ. ಇದರಿಂದಾಗಿ ಎಲ್ಲಾ ತರದ ಆರ್ಥಿಕ ಮುಗ್ಗಟ್ಟುಗಳು ಉಂಟಾಗುತ್ತವೆ.

## ಬಿಡುಗಡೆ ಹೇಗೆ ಸಾಧ್ಯ

ಕೊರಗ ಜನಾಂಗವು ಈ ವಿಷವರ್ತುಲದಿಂದ ಅತೀ ಶೀಘ್ರವಾಗಿ ಹೊರಬರಬೇಕಾಗಿದೆ. ಮುಂದಿನ ತಲೆಮಾರುಗಳಲ್ಲಿ ಈ ಜನಾಂಗವು ಇತರ ಬಲಿಷ್ಠ ಜನಾಂಗಗಳೊಂದಿಗೆ ತೀವ್ರತರದ ಪೈಪೋಟಿ ನಡೆಸಬೇಕಾಗಿದೆ. ಇಲ್ಲದೇ ಹೋದಲ್ಲಿ ಕೆಲವೇ ದಶಕಗಳಲ್ಲಿ ಈ ಸಮುದಾಯವು ಸರ್ವನಾಶವಾದೀತು ಹಾಗೂ ಅಳಿದುಳಿದ ಕುಟುಂಬಗಳು ಅತ್ಯಂತ ಶೋಚನೀಯವಾಗಿ ನರಳಬೇಕಾದೀತು. ಈ ಒಂದು ವ್ಯೂಹದಿಂದ ಹೊರಬರಬೇಕಾದರೆ ಅದಕ್ಕೆ ಪೂರಕವಾದ ವಾತಾವರಣವು ನಿರ್ಮಾಣವಾಗಬೇಕಿದೆ.

೧. ಸಮಾಜದ ದೃಷ್ಟಿಕೋನ ಬದಲಾಗಬೇಕು.
೨. ಕೊರಗರಲ್ಲಿ ಧೈರ್ಯ ಹಾಗೂ ಉಂಟುಮಾಡುವುದು.
೩. ಸರ್ಕಾರ ಕಟ್ಟುನಿಟ್ಟಾಗಿ ಕಾನೂನು ಜಾರಿಗೊಳಿಸುವುದು.
೪. ಕೊರಗ ಯುವಜನರನ್ನು ಸ್ವ- ಉದ್ಯೋಗಗಳಿಗೆ ತೊಡಗಿಸುವುದು.
೫. ಕೊರಗ ಮಹಿಳೆಯರಿಗೆ ಸ್ವ-ಸಹಾಯ ಸಂಘಗಳಲ್ಲಿ ಪಾಲ್ಗೊಳ್ಳುವ ಹಾಗೆ ಮಾಡುವುದು.

## ಅಸ್ಪೃಶ್ಯತೆ, ದೌರ್ಜನ್ಯ ಮತ್ತು ಸಂಬಂಧಿತ ಕಾನೂನುಗಳು

೧. ಅಜಲು ನಿಷೇಧ ಕಾಯಿದೆಯನ್ನು ೨೦೦೦ ಇಸವಿಯಲ್ಲಿ ಕರ್ನಾಟಕ ಸರಕಾರವು ಜಾರಿಗೆ ತಂದಿದೆ. ಇದರ ಪ್ರಾಕಾರ ಕೊರಗರನ್ನು ಅಜಲು ಪದ್ಧತಿಯಲ್ಲಿ ಒಳಪಡಿಸುವಂತಿಲ್ಲ.
೨. ಸಂವಿಧಾನದ ೧೫ನೇ ವಿಧಿಯ ಪ್ರಕಾರ ಜಾತಿ,ಜನಾಂಗ, ಮತ-ಪಂಥ, ಮತ ಪಂಗಡಗಳೆಂಬ ಬೇಧವಿಲ್ಲದೆ ಆದಿವಾಸಿಗಳನ್ನೊಳಗೊಂಡಂತೆ ಎಲ್ಲರಿಗೂ ಸಮಾನಾವಕಾಶಗಳನ್ನು ನೀಡಲಾಗಿದೆ.
೩. ಹಿಂದೂ ವಿವಾಹ ಕಾಯ್ದೆ- ೧೯೫೫
೪. ಹಿಂದೂ ಉತ್ತರಾಧಿಕಾರ ಕಾಯ್ದೆ- ೧೯೫೬
೫. ವಿಶೇಷ ವಿವಾಹ ಕಾಯ್ದೆ- ೧೯೫೪
೬. ವರದಕ್ಷಿಣೆ ನಿಷೇಧ ಕಾಯ್ದೆ-೧೯೬೧
೭. ಕನ್ಯೆಯರ ಮತ್ತು ಮಹಿಳೆಯರ ಅನೈತಿಕ ವ್ಯಾಪಾರ ಪ್ರತಿಬಂಧಕ ಕಾಯ್ದೆ- ೧೯೫೬
೮. ಸಮಾನ ವೇತನ ಕಾಯ್ದೆ-೧೯೭೬

## ಕೊರಗ ಸಮುದಾಯದ ಜನಗಣತಿ ವರದಿ- ೨೦೦೧

೨೦೦೧ ಜನಗಣತಿಯ ಪ್ರಕಾರ ದಕ್ಷಿಣಕನ್ನಡ ಮತ್ತು ಉಡುಪಿ ಜಿಲ್ಲೆಯಲ್ಲಿನ ಕೊರಗರ ಒಟ್ಟು ಜನಸಂಖ್ಯೆ ೧೫,೭೦೩

| ಕ್ರ.ಸಂಖ್ಯೆ | ಜಿಲ್ಲೆ/ತಾಲೂಕು | ಕುಟುಂಬದ ಸಂಖ್ಯೆ | ಪುರುಷರು | ಮಹಿಳೆಯರು | ಒಟ್ಟು |
|---|---|---|---|---|---|
| ಉಡುಪಿ | | | | | |
| ೧ | ಉಡುಪಿ | ೯೫೯ | ೧೯೭೫ | ೧೮೭೫ | ೩೮೫೦ |
| ೨ | ಕಾರ್ಕಳ | ೩೫೮ | ೬೬೬ | ೬೭೮ | ೧೩೪೪ |
| ೩ | ಕುಂದಾಪುರ | ೬೦೭ | ೧೧೩೫ | ೧೧೦೦ | ೨೨೩೫ |
| ಒಟ್ಟು | | ೧೯೨೦ | ೩೭೭೬ | ೩೬೫೩ | ೭೪೨೯ |

| ಕ್ರ.ಸಂಖ್ಯೆ | ಜಿಲ್ಲೆ/ತಾಲೂಕು | ಕುಟುಂಬದ ಸಂಖ್ಯೆ | ಪುರುಷರು | ಮಹಿಳೆಯರು | ಒಟ್ಟು |
|---|---|---|---|---|---|
| ದಕ್ಷಿಣಕನ್ನಡ | | | | | |
| ೧ | ಬಂಟ್ವಾಳ | ೧೭೦ | ೨೯೬ | ೨೬೭ | ೫೬೩ |
| ೨ | ಬೆಳ್ತಂಗಡಿ | ೯೮ | ೧೫೨ | ೧೩೬ | ೨೮೮ |
| ೩ | ಮಂಗಳೂರು | ೭೧೬ | ೧೩೭೨ | ೧೪೧೯ | ೨೭೯೧ |
| ೪ | ಸುಳ್ಯ | ೪೭ | ೭೭ | ೭೪ | ೧೫೧ |
| ೫ | ಪುತ್ತೂರು | ೧೦೪ | ೧೭೦ | ೧೭೪ | ೩೪೪ |
| ಒಟ್ಟು | | ೧೧೩೫ | ೨೦೬೭ | ೨೦೭೦ | ೪೧೩೭ |
| ಒಟ್ಟು ಮೊತ್ತ | | ೩೦೫೫ | ೫೮೪೩ | ೫೭೨೩ | ೧೧೫೬೬ |
| | | | | ಒಟ್ಟು | ೧೫೭೦೩ |

## ಸಮಸ್ಯೀಕರಣ:

ಕೊರಗ ಸಮುದಾಯದ ಕುರಿತಾದ ಸಾಕಷ್ಟು ಅದ್ಯಯನಗಳು ಈ ವರೆಗೆ ನಡೆದಿದ್ದರೂ ಕೊರಗ ಮಹಿಳೆಯರ ಬಗೆಗಿನ ಆಳವಾದ ಅಧ್ಯಯನ ನಡೆದಿಲ್ಲವೆಂದೇ ಹೇಳಬಹುದು. ಕೊರಗ ಮಹಿಳೆಯರು ಶಿಕ್ಷಣ ವಂಚಿತರೆಂದರೆ ತಪ್ಪಾಗದು. ಒಂದೆರಡು ಸರಕಾರೇತರ ಸಂಸ್ಥೆಗಳು ಕೊರಗ ಶಿಕ್ಷಣದ ಕುರಿತಾಗಿ ಉದ್ದೇಶವಿಟ್ಟು ಕಾರ್ಯ ನಿರ್ವಹಿಸಿದರೂ ಬಹುತೇಕ ಹೆಣ್ಣುಮಕ್ಕಳು ಈ ಸಂಸ್ಥೆಯೂ ಸೇರಿದಂತೆ ಶಿಕ್ಷಣದ ವ್ಯವಸ್ಥೆಯೊಳಗೆ ಸೇರಿಕೊಳ್ಳಲೇ ಇಲ್ಲ. ಆದುದರಿಂದ ಶಿಕ್ಷಣ ಹೆಣ್ಣುಮಕ್ಕಳಿಗೆ ಮರೀಚಿಕೆಯಾಗಿಯೇ ಉಳಿದಿರುವುದು ಅವರ ಅಭಿವೃದ್ದಿಗೆ ಬಹುದೊಡ್ಡ ಸವಲಾಗಿದೆ.

ಕೊರಗ ಸಮುದಾಯದ ಕುರಿತ ವ್ಯವಸ್ಥಿತ ಅಧ್ಯಯನಗಳು ೧೯೯೦ರಿಂದ ಪ್ರಾರಂಭಗೊಂಡಿದ್ದು, ೧೯೯೫ರ ಮಹಮ್ಮದ್ ಫೀರ್ ರ ನೇತೃತ್ವದಲ್ಲಿ ನಡೆಸಿದ ಕರಾವಳಿ ಕರ್ನಾಟಕದ ಕೊರಗ ಅಧ್ಯಯನ ಕೊರಗರ ಮೇಲೆ ಬಹಳ ಪ್ರಭಾವ ಬೀರುವ ಅಧ್ಯಯನವಾಯಿತು. ಆ ವರದಿಯ ಫಲವಾಗಿ ಸರಕಾರದ ಕೊರಗ ಕುಟುಂಬಗಳಿಗೆ ಹಂತ ಹಂತವಾಗಿ ಮನೆ ನಿವೇಶನಗಳು ಲಭ್ಯವಾಗುತ್ತಿವೆ.

ವಿವಿಧ ಅಧಯನಗಳು ಹಾಗೂ ಸರಕಾರಿ ಸವಲತ್ತುಗಳ ಹೊರತಾಗಿಯೂ ಕೊರಗ ಮಹಿಳೆಯರ ಸ್ಥಾನಮಾನ ಬಹಳಷ್ಟು ಕೆಳಮಟ್ಟದಲ್ಲಿವೆ. ಉಡುಪಿ ತಾಲೂಕಿನ ಕೊರಗ ಮಹಿಳೆಯ ಶೈಕ್ಷಣಿಕ ಹಿಂಬೀಳಿಕೆಗೆ ಕಾರಣ, ಅವರ ಆರ್ಥಿಕ ಸ್ಥಿತಿಗತಿ, ಸರಕಾರಿ ಯೋಜನೆಗಳ ಬಳಕೆ, ರಾಜಕೀಯ ಭಾಗವಹಿಸುವುಕೆ ಅಭಿವೃದ್ಧಿಯ ತೊಡಕುಗಳ ಕುರಿತಾದ ಅಧ್ಯಯನದ ಪ್ರಯತ್ನವನ್ನು ಇಲ್ಲಿ ನಡೆಸಲಾಗುವುದು.

ಹೀಗೆ ಅನೇಕ ಕೊರಗ ಮಹಿಳೆಯರ ಕುರಿತಾದ ಹುಟ್ಟುವ ಅನೇಕ ಅಭಿವೃದ್ಧಿ ಪರಿಕಲ್ಪನೆಯ ನಾನಾ ಪ್ರಶ್ನೆಗಳನ್ನು ಉತ್ತರಿಸಲು ನಡೆಸುವ ಯತ್ನವೇ ಈ ಅಧ್ಯಯನ.

## ಸಾಹಿತ್ಯ ವಿಮರ್ಶೆ:

*ಜಿ. ಎಫ್. ಮೇಟ್ಸ್ ಮತ್ತು ರಿವರ್ಸ್:-* ಅವರು ೧೮೬೪ರಲ್ಲಿ ನೀಲಗಿರಿಯ ಬುಡಕಟ್ಟುಗಳ ಅಧ್ಯಯನ ಮತ್ತು ಅವರು ದಕ್ಷಿಣ ಭಾರತದ ಜಾತಿಗಳ ಹಾಗೂ ಬುಡಕಟ್ಟುಗಳ ಬಗ್ಗೆ ಏಳು ಸಂಪುಟಗಳ ಕೃತಿಯನ್ನು ಪ್ರಕಟಿಸಿದ್ದಾರೆ.

*ಪ್ರೊ. ಕೆ. ಬೈರಪ್ಪ (೨೦೦೯) :-* ಅವರ *"ಭಾರತದ ಸಮಾಜ ಪರಂಪರೆ ಮತ್ತು ಪರಿವರ್ತನೆ ಭಾಗ-೨"* ಗ್ರಂಥದಲ್ಲಿ ಭಾರತದ ಬುಡಕಟ್ಟು, ಜನಾಂಗಗಳ ಅರ್ಥ, ದೈಹಿಕ ಲಕ್ಷಣಗಳು, ಸಮಸ್ಯೆಗಳು, ಭಾರತದ ಪ್ರಮುಖ ಬುಡಕಟ್ಟುಗಳು ಮತ್ತು ಇವರ ಏಳಿಗೆಗಾಗಿ ಸರಕಾರ ಕೈಗೊಂಡ ಯೋಜನೆಗಳ ಬಗ್ಗೆ ಸವಿಸ್ತಾರವಾದ ವಿವರಣೆಯನ್ನು ನೀಡಿದ್ದಾರೆ.

*ಸಂಪಾದಕ ಡಾ. ತಾರಿಹಳ್ಳಿ ಹನುಮಂತಪ್ಪ(೨೦೧೦):-* ಅವರ *"ಕರ್ನಾಟಕದ ಬುಡಕಟ್ಟು ಸಮುದಾಯಗಳು"* ಪುಸ್ತಕದಲ್ಲಿ ಬುಡಕಟ್ಟು ಸಮುದಾಯದವರ ಅದರಲ್ಲೂ ಹಕ್ಕಿಪಿಕ್ಕಿ ಜನಾಂಗ ಮತ್ತು ಲಂಬಾಣಿ ಮಹಿಳೆಯರ ರಾಜಕೀಯ ಭಾಗವಹಿಸುವಿಕೆ, ಆರೋಗ್ಯ ಸುದಾರಣಾ ವಿಧಾನಗಳು, ಆಹಾರಪದ್ಧತಿ, ಮತ್ತು ಬುಡಕಟ್ಟು ಸಮುದಾಯದ ಅಭಿವೃದ್ಧಿ, ಸಾಂಸ್ಕೃತಿಕ ಆಚರಣೆಗಳು ಪರಂಪರೆ ಮತ್ತು ಆಧುನಿಕತೆ ಇದರ ಬಗ್ಗೆ ಸವಿಸ್ತಾರವಾದ ವಿವರಣೆಯನ್ನು ನೀಡಿದ್ದಾರೆ.

ಕೊರಗರ ಬಗ್ಗೆ ಇನ್ನೊಂದು ಕೃತಿ ಎಂದರೆ *ಲಾರೆನ್ಸ್ ಡಿ'ಸೋಜಾ(೧೯೯೨)* ಅವರು ಬರೆದ ***Koragas - A Primitive Tribe of South India"*** ಈ ಕೃತಿಯಲ್ಲಿ ಲೇಖಕರು ಕೊರಗರ ಐತಿಹ್ಯಗಳು, ಕೊರಗರ ವಾಸಸ್ಥಾನ, ಕೊರಗರು ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ವಿಸ್ತಾರವಾದ ಮಾಹಿತಿಯನ್ನು ಕೊಟ್ಟಿದ್ದಾರೆ.

೧೯೯೪ರಲ್ಲಿ ***ಮಹಮ್ಮದ್ ಪೀರ್*** ಅವರು ***"Social Economics and Educational Conditions of Koragas"*** ಎಂಬ ಮಹಾಪ್ರಬಂಧವನ್ನು ಜಿಲ್ಲಾಪಂಚಾಯತ್ ಗೆ ಸಲ್ಲಿಸಿದರು. ಈ ಪ್ರಬಂಧದಲ್ಲಿ ಪೀರ್ ರವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೊರಗರ ಜನಸಂಖ್ಯೆ ಎಷ್ಟು? ಅವರ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಸ್ಥಾನಮಾನ ಮುಂತಾದವುಗಳ ಬಗ್ಗೆ ವಿವರಿಸಿದ್ದಾರೆ.

*ಬಾಬು ಕೊರಗ ಪಾಂಗಳ(೨೦೦೯)* ಅವರ ***"ಕೊರಗರ ಅಜಲು"*** *ಒಂದು ವಿಶ್ಲೇಷಣೆ* ಎಂಬ ಪುಸ್ತಕದಲ್ಲಿ ಕೊರಗರು ಅಜಲು ಪ್ರಕ್ರಿಯೆಯಲ್ಲಿ ಒಳಗೊಳ್ಳುವ ಕ್ರಿಯೆ ಹಾಗೂ ವಿಧಿಗಳ ಸಮಗ್ರ ವಿವರಗಳನ್ನು ವಿಶದವಾಗಿ ವಿವರಿಸಿದ್ದಾರೆ.

ಸಂಪಾದಕ *ಡಾ. ಗಂಗಾಧರ ದೈವಜ್ಞ (೨೦೧೨)* ಅವರ ***"ಕೊರಗರು ಸಮಕಾಲೀನ ಸ್ಪಂದನ"*** ಈ ಪುಸ್ತಕದಲ್ಲಿ ಡಾ. ಗೋವಿಂದರಾಜು ಬಿ.ಎಂ ಇವರ ಕೊರಗರ ಸ್ಥಿತಿಗತಿಗಳು ಎಂಬ ಲೇಖನ ಹೊರತುಪಡಿಸಿದರೆ ಈ ಪುಸ್ತಕದಲ್ಲಿರುವ ಎಲ್ಲಾ ಲೇಖನಗಳು ಕೊರಗ ಸಮುದಾಯದ ಲೇಖಕರ ಬರಹಗಳೇ ಆಗಿವೆ. ನಿರಂತರವಾಗಿ ತುಳಿತಕ್ಕೊಳಗಾಗಿರುವ ಕೊರಗರ ತುಡಿತ ಮಿಡಿತಗಳನ್ನು ಅವರ ಲೇಖನಗಳ ಮೂಲಕ ಪ್ರಕಟಿಸಲಾಗಿದೆ.

*ಇಂದಿರಾ ಹೆಗ್ಗಡೆ* ಇವರ ಪುಸ್ತಕ *"ತುಳುನಾಡಿನ ಕೊರಗರು-ಸಾಮಾಜಿಕ ಆರ್ಥಿಕ ಸ್ಥಿತಿಗತಿ"* ಇದರಲ್ಲಿ ಇವರು ತಮ್ಮ ಜೀವಮಾನದ ಶೋಧ ಮತ್ತು ಅರಿವನ್ನು ಒಗ್ಗೂಡಿಸಿ ಕರ್ನಾಟಕ ಕೊರಗ ಬುಡಕಟ್ಟಿನ ಅಮೂಲ್ಯ ಮಾಹಿತಿಯನ್ನು ಈ ಲೇಖನದಲ್ಲಿ ವೈಜ್ಞಾನಿಕವಾಗಿ ಹಂಚಿಕೊಳ್ಳಲು ಪ್ರಮಾಣಿಕ ಪ್ರಯತ್ನ ಮಾಡಿದ್ದಾರೆ.

*ಡಾ. ಡಿ. ಎಸ್. ಎನ್.ಭಟ್* ರವರು ಪ್ರಕಟಿಸಿರುವ *"ದಿ ಕೊರಗ ಲಾಂಗ್ವೆಜ್"* ಕೃತಿಯಲ್ಲಿ ಮೂರು ಬಗೆಯ ಕೊರಗ ಭಾಷಾ ಪ್ರಕಾರವನ್ನು ಗುರುತಿಸುತ್ತಾರೆ ಅವುಗಳು ಒಂಟಿ ಕೊರಗರು, ಸೊಪ್ಪು ಕೊರಗರು, ಬಾಕುಡ ಕೊರಗರು ಮಾತಾನಾಡುವ ಪ್ರಕಾರಗಳಾಗಿವೆ.

*ಡಾ. ಸವಿತಾ ನಾಯಕ* ಇವರು ಪ್ರಕಟಿಸಿರುವ *"ಬುಡಕಟ್ಟು ಮಹಿಳೆಯರ ಪ್ರಸಾಧನ ಕಲೆ" (೨೦೦೦)* ಇದರಲ್ಲಿ ಬುಡಕಟ್ಟು ಮಹಿಳೆಯರ ಕಲೆಯನ್ನು ಮಾತ್ರ ವಿವರಿಸಲು ಪ್ರಯತ್ನಿಸಲಾಗಿದೆ.

*ಪಿ. ವಾಸುದೇವನ್* ಐ.ಎ.ಎಸ್ ನಿವೃತ್ತಿ ಅಧಿಕಾರಿಯಾಗಿದ್ದು ಇವರು ಕೊರಗರ ಬಗ್ಗೆ ಆಳವಾದ ಅದ್ಯಯನವನ್ನು ಮಾಡಿದ್ದಾರೆ. ವಾಸುದೇವನ್ (೧೯೯೮) ರಲ್ಲಿ ಬರೆದ ಕೃತಿ ***"Koragas- The Forgotten lot- the Primitive Tribe of Tulu Nadu"*** *ಈ ಕೃತಿಯಲ್ಲಿ ವಾಸುದೇವನ್ ಅವರು* ಕೊರಗರ ಸಂಸ್ಕೃತಿ ಮತ್ತು ಇತಿಹಾಸದ ಬಗ್ಗೆ ಆಳವಾಗಿ ಅಭ್ಯಸಿಸಿದ್ದಾರೆ. ಇವರು ದ.ಕ ಮತ್ತು ಕಾಸರಗೋಡಿನಲ್ಲಿ ವಾಸಿಸುವ ಕೊರಗರ ಬಗ್ಗೆ ಮಾಹಿತಿಗಳನ್ನು ನೀಡಿದ್ದಾರೆ. ಕೊರಗರ ಜನಸಂಖ್ಯೆ ಭಾಷೆ, ಆರೋಗ್ಯ ಅಲ್ಲದೇ ಅವರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಬೆಳವಣಿಗೆಗಳ ಬಗ್ಗೆ ಸವಿಸ್ತಾರವಾದ ವಿವರಣೆಯನ್ನು ನೀಡಿದ್ದಾರೆ.

*ಯು. ರಾಘವೇಂದ್ರ ರಾವ್* ಇವರು ಕೊರಗರ ಬಗ್ಗೆ ಕೆಳಗಿನ ವಿವರಣೆಯನ್ನು ನೀಡಿದ್ದಾರೆ. ಇವರ ಪ್ರಕಾರ ದೈಹಿಕವಾಗಿ ಕೊರಗರು ಇತರರಿಗಿಂತ ಭಿನ್ನವಾಗಿದ್ದು ಅವರಿಗೆ ಅವರದ್ದೇ ಆದ ಭಾಷೆ, ಉಡುಪು ಮತ್ತು ಸಂಪ್ರದಾಯಗಳಿವೆ. ಇವರಿಗೆ ಅವರದೇ ಆದ ಸೀಮಿತವಾದ ಪ್ರಂಪಚವಿದೆ. ದೇಶದಲ್ಲಿ ಏನು ನಡೆಯುತ್ತದೆ ಎನ್ನುವುದರ ಅರಿವು ಇವರಿಗಿರುವುದಿಲ್ಲ. ಇದಕ್ಕೆ ಮುಖ್ಯ ಕಾರಣವೇನೆಂದರೆ ಇವರು ಅಸ್ಪೃಶ್ಯರು ಮತ್ತು ಅನಕ್ಷರಸ್ಥರು. ಇವರಿಗೆ ದೇವರ ಮೇಲೆ ಅಪಾರವಾದ ನಂಬಿಕೆಯಿದೆ. ಯಾವುದೇ ಸಾಮಾಜಿಕ ಅನಿಷ್ಟಗಳು ಇವರಿಗೆ ಗೊತ್ತಿಲ್ಲ. ಕೊರಗರು ಗುಲಾಮರಾಗಿ ತೀರಾ ಹೀನಾಯ ಸ್ಥಿತಿಯಲ್ಲಿದ್ದರು ಅತ್ಯಂತ ದುಃಖಿಗಳಗಾಲೀ, ಅಸಂತೋಷಿಗಳಾಗಲೀ ಇಲ್ಲದಿರುವುದು ಕಂಡುಬರುತ್ತದೆ. ಎಂದು ಇವರು ಅಭಿಪ್ರಾಯ ಪಡುತ್ತಾರೆ.

ಎಡ್‌ಗರ್ ತರ್‌ಸ್ಟನ್ ಬರೆದಿರುವ **"Castes and Tribes of Southern India" Volume** ***III k*** ಈ ಪುಸ್ತಕದಲ್ಲಿ ಎಲ್ಲಾ ಆದಿವಾಸಿ ಬುಡಕಟ್ಟುಗಳ ಬಗ್ಗೆ ವಿವರಿಸಿದ್ದಾರೆ. ಅದರಲ್ಲೂ ಕೊರಗರ ಬಗ್ಗೆ ಅವರ ಜೀವನಶೈಲಿ ಹಿನ್ನಲೆ, ಆಚರಣೆಗಳು ಇದರ ಬಗ್ಗೆ ಪುಟಸಂಖ್ಯೆ ೪೨೫ ರಲ್ಲಿ ವಿವರಿಸಿದ್ದಾರೆ.

*ಚ. ನ. ಶಂಕರ್ ರಾವ್ "ಭಾರತೀಯ ಸಮಾಜ"(೨೦೦೨)* ಈ ಪುಸ್ತಕದಲ್ಲಿ ಭಾರತದಲ್ಲಿನ ಆದಿವಾಸಿಗಳು, ಅವರ ಲಕ್ಷಣ, ಸಮಸ್ಯೆಗಳು, ಸಂವಿಧಾನದ ಸವಲತ್ತುಗಳು ಇದರ ಬಗ್ಗೆ ಸವಿಸ್ತಾರವಾಗಿ ತಿಳಿಸಿದ್ದಾರೆ.

## ಅಧ್ಯಯನದ ಉದ್ದೇಶಗಳು :

- ಕೊರಗ ಮಹಿಳೆಯರ ಶೈಕ್ಷಣಿಕ ಸ್ಥಿತಿಗತಿಯ ಅಧ್ಯಯನ
- ಕೊರಗ ಮಹಿಳೆಯರ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿಯ ವಿಶ್ಲೇಷಣೆ
- ಕೊರಗ ಮಹಿಳಾ ಮೀಸಲಾತಿ ಮತ್ತು ಸರಕಾರಿ ಸವಲತ್ತುಗಳ ಕುರಿತ ಅಧ್ಯಯನ
- ಕೊರಗ ಮಹಿಳೆಯರ ರಾಜಕೀಯ ಅರಿವು ಮತ್ತು ಭಾಗವಹಿಸುವಿಕೆ ಕುರಿತ ವಿಶ್ಲೇಷಣೆ.

## ಅಧ್ಯಯನದ ವ್ಯಾಪ್ತಿ :

ಪ್ರಸ್ತುತ ಅಧ್ಯಯನವು ಕೊರಗ ಸಮುದಾಯದ ಮಹಿಳೆಯರ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತ್ಯಂತರಗಳನ್ನು ಆಧರಿಸಿರುವುದು. ಮಹಿಳೆಯರ ಸ್ಥಿತಿಗತಿಯು ಬಗ್ಗೆ ಗಮನ ಹರಿಸುವುದು. ಕೊರಗ ಮಹಿಳೆಯರು ಅಭಿವೃದ್ಧಿ ಆಗಬೇಕಾದರೆ ಅವರಿಗಿರುವ ಸಮಸ್ಯೆಗಳು, ಉದ್ಯೋಗ, ಮುಂತಾದವುಗಳ ಬಗ್ಗೆ ಅಧ್ಯಯನ ನಡೆಸುವುದು.

## ಅಧ್ಯಯನದ ವಿಧಾನ:

ಕೊರಗ ಮಹಿಳೆಯರ ಅಭಿವೃದ್ಧಿಯ ಸಮಸ್ಯೆಗಳ ಮಾಹಿತಿಯನ್ನು ವಿವಿಧ ಮೂಲಗಳಿಂದ ಮತ್ತು ವಿವಿಧ ವಿಧಾನಗಳಿಂದ ಪಡೆಯಲಾಗುವುದು. ಕೊರಗ ಮಹಿಳೆಯರ ಒಟ್ಟು ಸಂಖ್ಯೆ ಹಾಗೂ ಶೈಕ್ಷಣಿಕ ದಾಖಲಾತಿಗೆ ಸಂಬಂಧಪಟ್ಟ ಮಾಹಿತಿಯನ್ನು ಅನುಷಂಗಿಕ ಮೂಲಗಳಿಂದ ಪಡೆಯಲಾಗುವುದು ಮಹಿಳೆಯರ ಪಾತ್ರ, ಆರ್ಥಿಕ ಸ್ಥಿತಿಗತಿ ಹಾಗೂ ಸಮಸ್ಯೆಗಳ ಮಾಹಿತಿಯನ್ನು ಪ್ರಾಥಮಿಕ ಮೂಲಗಳಾದ ಅವಲೋಕನ, ಪ್ರಶ್ನಾವಳಿ ಮತ್ತು ಸಂದರ್ಶನದ ಮೂಲಕ ಸಂಗ್ರಹಿಸಿ ಮಾಹಿತಿ ಪಡೆಯಲಾಗುವುದು. ಸಂಗ್ರಹಿಸಿದ ಮಾಹಿತಿಯನ್ನು ವಿವರಣಾತ್ಮಕ ವಿಧಾನದಿಂದ ವಿಶ್ಲೇಷಿಸಿ ವರದಿ ಮಾಡಲಾಗುವುದು.

## ಅಧ್ಯಾಯಗಳ ವರ್ಗೀಕರಣ :

- ಮೊದಲನೆಯ ಅಧ್ಯಾಯದಲ್ಲಿ ಉಡುಪಿ ತಾಲೂಕಿನ ಪರಿಚಯ, ಪರಾಮರ್ಶನ ಗ್ರಂಥಗಳು, ಸಮುದಾಯದ ಪರಿಚಯ, ಅಧ್ಯಯನದ ಉದ್ದೇಶ, ಸಂಶೋಧನಾ ವಿಧಾನ ಇತ್ಯಾದಿಗಳನ್ನು ನಿ ರೂಪಿಸಲಾಗುವುದು.
- ಎರಡನೇ ಅಧ್ಯಾಯದಲ್ಲಿ ಕೊರಗ ಮಹಿಳೆಯರ ಸಾಮಾಜಿಕ ಸ್ಥಿತಿಗತಿಗಳ ಸ್ಥೂಲ ಪರಿಚಯವನ್ನು ಒದಗಿಸಲಾಗುವುದು.
- ಮೂರನೆಯ ಅಧ್ಯಾಯದಲ್ಲಿ ಕೊರಗ ಮಹಿಳೆಯರ ಸಾಮಜಿಕ ಆರ್ಥಿಕ ಸ್ಥಿತಿಗತಿಯ ಬಗ್ಗೆ ವಿವರಿಸಲಾಗುವುದು.
- ನಾಲ್ಕನೆಯ ಅಧ್ಯಾಯದಲ್ಲಿ ಬುಡಕಟ್ಟು ಮಹಿಳಾ ಮೀಸಲಾತಿ ಸಬಲೀಕರಣಕ್ಕೆ ಪೂರಕವಾಗಿರುವಂತಹ ಕರ್ನಾಟಕ ಸರಕಾರದ ಸರಕಾರಿ ಯೋಜನೆಗಳು ಹಾಗೂ ಅವುಗಳ ಬಳಕೆಯ ಬಗ್ಗೆ ಚರ್ಚಿಸಲಾಗುವುದು.
- ಐದನೆಯ ಅಧ್ಯಾಯವು ಸಮಾರೋಪ ಅಧ್ಯಾಯವಾಗಿದ್ದು, ಸಮುದಾಯದ ಅಭಿವೃದ್ಧಿಗೆ ಅಗತ್ಯ ಸಲಹೆ ಮತ್ತು ಸೂಚನೆಗಳನ್ನು ನೀಡಲಾಗುವುದು.

ಅಧ್ಯಾಯ-೨

# ಕೊರಗ
# ಮಹಿಳೆಯರ
# ಶೈಕ್ಷಣಿಕ ಸ್ಥಿತಿಗತಿ

# ಶೈಕ್ಷಣಿಕ ಸ್ಥಿತಿಗತಿ

ಸಾಂಸ್ಕೃತಿಕ ಹಿನ್ನೆಲೆಯಿಂದ ಬಂದಿರುವ ಒಂದು ಕೊರಗ ಮಗು, ಶಿಕ್ಷಕರು ಮತ್ತು ಇತರ ,ಮಕ್ಕಳೊಂದಿಗೆ ಆತ್ಮವಿಶ್ವಾಸದೊಂದಿಗೆ ಬೆರೆಯಲು ಇಂದಿನ ದಿನಗಳಲ್ಲಿ ಸಾಧ್ಯವಾಗುತ್ತಿಲ್ಲ. ಕಾರಣ ಶಿಕ್ಷಕ ವರ್ಗ ಮತ್ತು ಇತರ ಪೂರ್ವಾಗ್ರಹಗಳನ್ನು ಇಟ್ಟುಕೊಂಡು ಶಿಕ್ಷಕರು ಬೋಧಿಸುತ್ತಾರೆ. ಇಂತಹ ಪೂರ್ವಾಗ್ರಹಗಳು ಮಗುವಿನ ಮೇಲೆ ಕೆಟ್ಟ ಪರಿಣಾಮ ಬೀರುತ್ತದೆ. ಒಮ್ಮೆ ಆತ್ಮವಿಶ್ವಾಸ ಕಳೆದುಕೊಂಡ ಮಗು ಮತ್ತೆ ಸುಧಾರಿಸುವಲ್ಲಿ ಮನಸ್ಸು ಮಾಡುವುದಿಲ್ಲ. ಆದ್ದರಿಂದ ಕೊರಗರ ಮಕ್ಕಳು ಗುಣಾತ್ಮಕ ಶಿಕ್ಷಣವನ್ನು ಪಡೆಯುವಲ್ಲಿ ವಿಫಲರಾಗಿದ್ದಾರೆ.

ಶಾಲೆಗೆ ಸೇರಿದ ಮಕ್ಕಳಲ್ಲಿ ಶೇ.೫೦ ರಿಂದ ೬೦ ಮಕ್ಕಳು ಪ್ರಾಥಮಿಕ ಶಿಕ್ಷಣದ ಹಂತದಲ್ಲಿಯೇ ಶಾಲೆ ಬಿಡುವುದು ಕೊರಗ ಸಮುದಾಯದಲ್ಲಿರುವ ಶಿಕ್ಷಣದ ಪರಿಸ್ಥಿತಿಯ ಗಂಭೀರತೆಯನ್ನು ಸೂಚಿಸುತ್ತದೆ. ಇಂತಹ ಪರಿಸ್ಥಿತಿಯಲ್ಲಿ ಡಿಗ್ರಿ ಪಡೆದವರು ಅಲ್ಲಲ್ಲಿ ಕಂಡುಬರುವರು. ಇದಕ್ಕೆ ಅವರ ಮೇಲೆ ಹೇರಲ್ಪಟ್ಟ ಅಜಲು ಮುಖ್ಯ ಕಾರಣವಾದರೆ, ಹೊಂದಿಕೊಳ್ಳಲಾಗದ ಶಾಲೆಯ ಹೊಸ ವಾತಾವರಣ ಎರಡನೆಯ ಕಾರಣ. ಮನೆಯ ಸಾಂಪ್ರದಾಯಿಕ ಪರಿಸರದಲ್ಲಿ ಬೆಳೆದ ಮಕ್ಕಳು ತಮ್ಮ ಪಾಲಿಗೆ ಎದುರಾದ ಶಾಲೆಯ ಆಧುನಿಕ ಪರಿಸರಕ್ಕೆ ಒಗ್ಗಿಕೊಳ್ಳಲಾಗದೆ ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ. ಮಕ್ಕಳ ಶಿಕ್ಷಣದ ಸಂದರ್ಭದಲ್ಲಿ ಕೂಡಾ ಪ್ರಿಮಿಟಿವ್ ಟ್ರೈಬಲ್ ಗ್ರೂಫ಼್ ಅನ್ನುವ ಪರಿಕಲ್ಪನೆಯನ್ನು ಸರ್ಕಾರ ಪರಿಗಣಿಸಬೇಕಾಗಿದೆ. ಇಂದು ನಾವು ೨೧ನೇ ಶತಮಾನದಲ್ಲಿದ್ದು ಆಧುನಿಕ ಯುಗ , ಕಂಪ್ಯೂಟರ್ ಯುಗ, ವೈಜ್ಞಾನಿಕ ಯುಗವೆಂತಲೂ ನಾವೆಲ್ಲರೂ ಒಪ್ಪಿಕೊಂಡಿದ್ದೇವೆ. ಇಂತಹ ಯುಗದಲ್ಲಿ ಭಾರತದಂತಹ ಅಭಿವೃದ್ಧಿಶೀಲ ರಾಷ್ಟ್ರದಲ್ಲಿ ಹಾಗೂ ಶಿಕ್ಷಣದಲ್ಲಿ ಮುಂದುವರಿದ ದಕ್ಷಿಣಕನ್ನಡ ಹಾಗೂ ಉಡುಪಿ ಜಿಲ್ಲೆಗಳಲ್ಲಿ ಶತಮಾನದಿಂದ ಕೇವಲ ೧೫,೭೦೩ ಜನಸಂಖ್ಯೆ ಹೊಂದಿದ ಕೊರಗ ಸಮುದಾಯದಲ್ಲಿ ಶಿಕ್ಷಣ ಮರೀಚಿಕೆಯಾಗಿರುವುದು ದೊಡ್ಡ ದುರಂತವೇ ಸರಿ. ಇಂದು ಸಮುದಾಯದಲ್ಲಿ ಪದವೀಧರರ ಸಂಖ್ಯೆ ೩೦ ಇರಬಹುದೆಂದು ಅಂದಾಜಿಸಲಾಗಿದೆ. ಹಾಗೆಯೇ ೭ನೇ ತರಗತಿಯ ನಂತರ ಶಿಕ್ಷಣವನ್ನು ಮುಂದುವರಿಸುವವರ ಸಂಖ್ಯೆ ಕಡಿಮೆ. ಅಲ್ಲದೆ ಮಧ್ಯದಲ್ಲಿಯೇ ಶಾಲೆ ಬಿಡುವಂತಹ ಡ್ರಾಫ಼್ ಔಟ್ ಸಮಸ್ಯೆಗಳು ಇದಕ್ಕೆ ಮುಖ್ಯ ಕಾರಣ. ಕೊರಗ ಸಮುದಾಯದ ಸಾಂಸ್ಕೃತಿಕ ಹಿನ್ನೆಲೆ, ಭಾಷೆ, ಮಾನಸಿಕ ಸ್ಥಿತಿ ಹೊದಿದ ಅವರು ಇತರ ಸಮುದಾಯಗಳಿಂದ ದೂರವಿದ್ದಾರೆ. ಕೊರಗ ಸಮುದಾಯದ ಒಂದು ಮಗು ಶಾಲೆಗೆ ಸೇರಿದ ಪ್ರಾರಂಭದಲ್ಲಿ ಶಿಕ್ಷಕರೊಂದಿಗೆ ಹಾಗೂ ಇತರ ಮಕ್ಕಳೊಂದಿಗೆ ತನ್ನನ್ನು ತಾನು ಹೇಗೆ ನಿರ್ವಹಿಸಿಕೊಳ್ಳಬೇಕು ಎನ್ನುವುದು ಅರ್ಥವಾಗುತ್ತಿಲ್ಲ ಹಾಗೂ ಭಾಷಾ ಸಮಸ್ಯೆಯಿಂದಾಗಿ ತರಗತಿಯಲ್ಲಿ ಕಲಿಸುವ ಪಾಠ ಅರ್ಥವಾಗದೇ ಇರುವುದು. ಈ ಎಲ್ಲಾ ಸಮಸ್ಯೆಗಳಿಂದ ಮಗು ಆತ್ಮವಿಶ್ವಾಸದಿಂದ ಇತರರೊಂದಿಗೆ ಬೆರೆಯುವ ಹಾಗೂ ಶಿಕ್ಷಣಕ್ಕೆ ಹೊಂದಿಕೊಳ್ಳಲು ಸಾಧ್ಯವಾಗದೇ ಶಾಲೆಯನ್ನು ಬಿಡುವುದನ್ನು ಕಾಣಬಹುದು.

ಈ ಮೇಲಿನ ಕಾರಣಗಳಿಂದ ಹೆಚ್ಚಿನ ಮಹಿಳೆಯರು ಅನಕ್ಷರಸ್ಥರಾಗಿದ್ದಾರೆ. ಅಲ್ಲದೆ ಬಡತನ, ಪ್ರೋತ್ಸಾಹದ ಕೊರತೆ, ತಾವು ವಾಸಿಸುತ್ತಿರುವ ಪ್ರದೇಶವು ಶಾಲೆಯಿಂದ ದೂರವಿರುವುದು ಮತ್ತು ಶಿಕ್ಷಣದ ಬಗ್ಗೆ ಅರಿವಿಲ್ಲದಿರುವುದು ಹಾಗೂ ಇನ್ನಿತರ ಕಾರಣಗಳಿಂದಾಗಿ ಕೊರಗ ಹೆಣ್ಣು ಮಕ್ಕಳು ಶಾಲೆಗೆ ಹೋಗುವುದು ತೀರಾ ವಿರಳವಾಗಿದೆ ಎಂದು ಹೇಳಬಹುದು.

### ಕೋಷ್ಟಕ ಸಂಖ್ಯೆ – ೨.೧

### ಕೊರಗ ಸಮುದಾಯದ ಶಿಕ್ಷಣ

| ಕ್ರ.ಸಂ | ಶಿಕ್ಷಣ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಅನಕ್ಷರಸ್ಥ | ೪೬ | ೪೬ |
| ೨ | ಪ್ರಾಥಮಿಕ | ೩೪ | ೩೪ |
| ೩ | ಪ್ರೌಢಶಾಲೆ | ೧೧ | ೧೧ |
| ೪ | ಪಿ.ಯು.ಸಿ | ೪ | ೪ |
| ೫ | ಪದವಿ | ೨ | ೨ |
| ೬ | ಸ್ನಾತಕೊತ್ತರ | ೩ | ೩ |
| ಒಟ್ಟು | | ೧೦೦ | ೧೦೦ |




ಮೇಲಿನ ಕೋಷ್ಟಕ ವಿವರಿಸುವುದನೇಂದರೆ ೪೬%ಕೊರಗ ಮಹಿಳೆಯರು ಅನಕ್ಷರಸ್ಥರಾಗಿದ್ದಾರೆ. ೩೪% ಮಹಿಳೆಯರು ಪ್ರಾಥಮಿಕ ಶಿಕ್ಷಣವನ್ನು, ೧೧% ಮಂದಿ ಪ್ರೌಢಶಾಲೆ ಶಿಕ್ಷಣವನ್ನು, ೪%ಕೊರಗ ಮಹಿಳೆಯರು ಪಿ.ಯು.ಸಿ ಶಿಕ್ಷಣ ೨%ಮಂದಿ ಪದವಿಯನ್ನು, ೩% ಮಂದಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ.

ಈ ಅಧ್ಯಯನವು ತೀಳಿಸುವುದನೇಂದರೆ ಹೆಚ್ಚಿನ ಮಹಿಳೆಯರು ಅನಕ್ಷರಸ್ಥರಾಗಿದ್ದಾರೆ ಕಾರಣ ಬಡತನ, ಪ್ರೋತ್ಸಹದ ಕೊರತೆ, ಅಲ್ಲದೆ ತಾವು ವಾಸಿಸುತ್ತಿರುವ ಪ್ರದೇವು ಶಾಲೆಯಿಂದ ದೂರ ಇರುವುದು, ಅರಿವು ಇಲ್ಲದಿರುವುದು ಮುಂತಾದ ಕಾರಣಗಳಿಂದಾಗಿ ಶಾಲೆಗೆ ಹೋಗುವುವವರ ಸಂಖ್ಯೆ ತುಂಬಾ ಕಡಿಮೆಎಂದು ಹೇಳಬಹುದು

**ಕೋಷ್ಟಕ ಸಂಖ್ಯೆ – ೨.೨**

**ಮನೆಯಿಂದ ಶಾಲೆಗೆ ಇರುವ ದೂರ**

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ೩ಕಿ.ಮೀ.ಗಿಂತ ಕಡಿಮೆ | ೪೫ | ೪೫ |
| ೨ | ೩-೫ ಕಿ.ಮೀ | ೫೫ | ೫೫ |
| ೩ | ೫-೬ ಕಿ.ಮೀ | ೦ | ೦ |
| ೪ | ೬ಕ್ಕಿಂತ ಹೆಚ್ಚು | ೦ | ೦ |
| ಒಟ್ಟು | | ೧೦೦ | ೧೦೦ |

ಈ ಮೇಲಿನ ಕೋಷ್ಟಕ ತೋರಿಸುವುದೇನೆಂದರೆ ೪೫% ಕೊರಗ ಸಮುದಾಯದವರು ವಾಸಿಸುವ ಮನೆಗೂ ಮತ್ತು ಶಾಲೆಗೂ ೩ ಕಿ.ಮೀ. ಗಿಂತ ಕಡಿಮೆ ಅಂತರವಿದೆ. ಹಾಗೂ ೫೫% ಕುಟುಂಬವು ಶಾಲೆಯಿಂದ ೩ ರಿಂದ ೫ ಕಿ.ಮೀ. ಅಂತರದಲ್ಲಿ ವಾಸಿಸುತ್ತಿದ್ದಾರೆ ಎಂದು ತೋರಿಸುತ್ತದೆ.

ಈ ಅಧ್ಯಯನದ ಪ್ರಕಾರ ೫೫% ಕೊರಗ ಸಮುದಾಯದ ಕುಟುಂಬವು ಶಾಲೆಯಿಂದ ೩ ರಿಂದ ೪ ಕಿ.ಮೀ ದೂರದಲ್ಲಿ ವಾಸಿಸುವುದರಿಂದ ಸರಿಯಾದ ರಸ್ತೆ ಸಂಪರ್ಕ, ವಾಹನದ ಸೌಲಭ್ಯ ಇಲ್ಲದ ಕಾರಣ, ಸರಿಯಾದ ಪ್ರೋತ್ಸಾಹಕದ ಕೊರತೆಯಿಂದಾಗಿ ಹೆಚ್ಚಿನ ಮಕ್ಕಳು ಅರ್ಧದಲ್ಲಿಯೇ ಶಾಲೆಯನ್ನು ಬಿಡುತ್ತಾರೆ ಎಂಬುದನ್ನು ತಿಳಿದುಕೊಳ್ಳಬಹುದಾಗಿದೆ.

**ಕೋಷ್ಟಕ ಸಂಖ್ಯೆ – ೨.೩**

**ಶಾಲೆಯಲ್ಲಿ ಮಕ್ಕಳಿಗೆ ಸರ್ಕಾರದಿಂದ ಸಿಗುವ ವಿದ್ಯಾರ್ಥಿವೇತನ ಸಿಗುತ್ತಿದೆಯೇ?**

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹೌದು | ೧೦೦ | ೧೦೦ |
| ೨ | ಇಲ್ಲ | - | - |
| ಒಟ್ಟು | | ೧೦೦ | ೧೦೦ |




ಈ ಅಧ್ಯಯನದಿಂದ ಶೇಕಡಾ ೧೦೦ ರಷ್ಟು ಕೊರಗ ಸಮುದಾಯದ ಎಲ್ಲಾ ಮಕ್ಕಳಿಗೂ ಸರ್ಕಾರದಿಂದ ಸಿಗುವ ವಿದ್ಯಾರ್ಥಿವೇತನ ಶಾಲೆಯಲ್ಲಿ ಸಿಗುತ್ತಿದೆ ಎಂದು ಮಾಹಿತಿದಾರರು ನೀಡಿರುವ ಮಾಹಿತಿಯಿಂದ ನಾವು ಕಂಡುಕೊಳ್ಳಬಹುದಾಗಿದೆ.

## ಕೋಷ್ಟಕ ಸಂಖ್ಯೆ – ೨.೪

## ಕೊರಗ ಕುಟುಂಬದಲ್ಲಿ ಶಾಲೆ ಬಿಟ್ಟ ಮಕ್ಕಳು

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹೌದು | ೫೫ | ೫೫ |
| ೨ | ಇಲ್ಲ | ೪೫ | ೪೫ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕದಲ್ಲಿ ತೋರಿಸುವುದನೇಂದರೆ ೫೫% ಕುಟುಂಬದಲ್ಲಿ ಶಾಲೆ ಬಿಟ್ಟ ಮಕ್ಕಳು ಇದ್ದಾರೆ ೪೫% ಕುಟುಂಬದಲ್ಲಿ ಶಾಲೆಯನ್ನು ಬಿಟ್ಟ ಮಕ್ಕಳು ಇಲ್ಲ. ಶಾಲೆಯನ್ನು ಬಿಡಲು ಮುಖ್ಯ ಕಾರಣ ಬಡತನ, ಕೀಳರಿಮೆ, ಇತರ ಮಕ್ಕಳೊಂದಿಗೆ ಬೆರೆಯಲು ಸಂಕೋಚದ ಭಾವನೆ. ಮುಂತಾದ ಕಾರಣಗಳಿಂದಾಗಿ ಕೊರಗ ಸಮುದಾಯದ ಮಕ್ಕಳು ಅರ್ದದಲ್ಲಿಯೇ ಶಾಲೆಯನ್ನು ಬಿಡುತ್ತಾರೆ.

**ಕೋಷ್ಟಕ ಸಂಖ್ಯೆ – ೨.೫**

**ಯಾವ ತರಗತಿಯಲ್ಲಿ ಶಾಲೆ ಬಿಟ್ಟಿರುತ್ತಾರೆ?**

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ೧-೫ | ೦ | ೦ |
| ೨ | ೫-೧೦ | ೬೫ | ೬೫ |
| ೩ | ೧೦-೧೨ | ೩೫ | ೩೫ |
| ೪ | ೧೨-೧೫ | ೦ | ೦ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕದಿಂದ ಕಂಡುಕೊಂಡ ಅಂಶವೇನಂದರೆ ೫ ರಿಂದ ೧೦ನೇ ತರಗತಿಯಲ್ಲಿ ಶಾಲೆ ಬಿಟ್ಟವರ ಸಂಖ್ಯೆ ೬೫% ರಷ್ಟಿದೆ. ೩೫% ರಷ್ಟು ಮಕ್ಕಳು ಮಾತ್ರ ೧೦ ರಿಂದ ೧೨ನೇ ತರಗತಿಯಲ್ಲಿ ಶಾಲೆಯನ್ನು ಬಿಟ್ಟಿರುತ್ತಾರೆ.ಈ ಅಧ್ಯಯನದ ಪ್ರಕಾರ ಹೆಚ್ಚಿನ ಮಕ್ಕಳು ೫ ರಿಂದ ೧೦ ನೇ ತರಗತಿಯಲ್ಲಿ ಶಾಲೆಯನ್ನು ಬಿಟ್ಟಿರುತ್ತಾರೆ. ಇದಕ್ಕೆ ಮುಖ್ಯ ಕಾರಣ ಬಡತನ, ಕೀಳರಿಮೆ. ಹೆಚ್ಚಿನವರು ಕಾಡಿನಲ್ಲಿ ವಾಸಿಸುವುದರಿಂದ ಅವರು ಇರುವ ಪ್ರದೇಶದಿಂದ ಶಾಲೆಗೆ ತುಂಬಾ ಅಂತರವಿರುವುದರಿಂದ ಹಾಗೂ ಸರಿಯಾದ ರಸ್ತೆ ಸಂಪರ್ಕ ಇಲ್ಲದೆ ಇರುವುದರಿಂದ ಶಾಲೆಗೆ ಮಕ್ಕಳನ್ನು ಕಳುಹಿಸುವುದಿಲ್ಲ. ಅಲ್ಲದೆ ತಂದೆ-ತಾಯಿಯರು ಅನಕ್ಷರಸ್ಥರಾಗಿರುವುದರಿಂದ ಹಾಗೂ ಶಿಕ್ಷಣದ ಬಗ್ಗೆ ಅರಿವು ಇಲ್ಲದಿರುವುದರಿಂದ ಪಿ.ಯು.ಸಿ.ತನಕ ಓದುವವರ ಸಂಖ್ಯೆಯೇ ಕಡಿಮೆ. ಅಲ್ಲದೆ ಡಿಗ್ರಿ,ಸ್ನಾತಕೋತ್ತರ ಪದವಿ ಪಡೆಯುವವರ ಸಂಖ್ಯೆ ತುಂಬಾ ವಿರಳ. ತಮ್ಮ ಅಜ್ಞಾನದಿಂದಾಗಿ ಅವರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ಅಷ್ಟೊಂದು ಪ್ರಾಮುಖ್ಯತೆಯನ್ನು ನೀಡುತ್ತಿಲ್ಲ.

**ಕೋಷ್ಟಕ ಸಂಖ್ಯೆ-೨.೬**

**ಶಿಕ್ಷಣ ಗಂಡು ಮಕ್ಕಳಿಗೆ ಮಾತ್ರ ಪ್ರಾಮುಖ್ಯತೆ/ಅಗತ್ಯ ಎಂದು ಭಾವಿಸಿದ್ದಾರೆ.**

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹೌದು | ೦ | ೦ |
| ೨ | ಇಲ್ಲ | ೧೦೦ | ೧೦೦ |
| ಒಟ್ಟು | | ೧೦೦ | ೧೦೦ |




ಈ ಅಧ್ಯಯನವು ತಿಳಿಯಪಡಿಸುವುದೇನೆಂದರೆ ಕೊರಗ ಸಮುದಾಯದಲ್ಲಿ ಶೇಕಡಾ ೧೦೦ ರಷ್ಟು ಕುಟುಂಬದವರು ತಮ್ಮ ಗಂಡು ಮಕ್ಕಳ ಶಿಕ್ಷಣದ ಜೊತೆ-ಜೊತೆಗೆ ಹೆಣ್ಣು ಮಕ್ಕಳಿಗೂ ಶಿಕ್ಷಣದ ಅಗತ್ಯ ಬಹಳ ಮುಖ್ಯವಾಗಿದೆ ಎಂದು ತಿಳಿದುಕೊಂಡಿದ್ದಾರೆ. ಕೇವಲ ಗಂಡು ಮಕ್ಕಳು ಮಾತ್ರ ಶಿಕ್ಷಣವನ್ನು ಪಡೆಯಬೇಕು; ಹೆಣ್ಣು ಮಕ್ಕಳು ಶಿಕ್ಷಣವನ್ನು ಪಡೆಯಬಾರದು ಎನ್ನುವ ತಾರತಮ್ಯದ ಭಾವನೆ ಅವರಲ್ಲಿ ಇಲ್ಲ ಎಂದು ಹೇಳಬಹುದು.

### ಕೋಷ್ಟಕ ಸಂಖ್ಯೆ-೨.೭

### ಮಹಿಳೆಯರು ತಮ್ಮ ಮಕ್ಕಳ ಶಿಕ್ಷಣದ ನಿರ್ಧಾರವನ್ನು ತೆಗೆದುಕೊಳ್ಳುತ್ತಿದ್ದಾರಾ!

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹೌದು | ೫೦ | ೫೦ |
| ೨ | ಇಲ್ಲ | ೫೦ | ೫೦ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕದಿಂದ ಕಂಡುಕೊಂಡ ಅಂಶವೇನೆಂದರೆ ಶೇಕಡಾ ೫೦% ರಷ್ಟು ಕೊರಗ ಸಮುದಾಯದ ಮಹಿಳೆಯರು ತಮ್ಮ ಮಕ್ಕಳ ಶಿಕ್ಷಣದ ನಿರ್ಧಾರವನ್ನು ತೆಗೆದುಕೊಳ್ಳುತ್ತಿದ್ದಾರೆ; ಅಂದರೆ ಕುಟುಂಬದಲ್ಲಿ ತಾಯಿಯರಿಗೂ ಪ್ರಾಮುಖ್ಯತೆ ಇದೆ ಎಂಬುದನ್ನು ತಿಳಿಸುತ್ತದೆ. ಅಲ್ಲದೆ ೫೦% ಕೊರಗ ಸಮುದಾಯದ ಗಂಡಸರು ತಮ್ಮ ಮಕ್ಕಳ ಶಿಕ್ಷಣದ ನಿರ್ಧಾರವನ್ನು ತೆಗೆದುಕೊಳ್ಳುತ್ತಿದ್ದಾರೆ ಎಂಬುದನ್ನು ಕೂಡಾ ತಿಳಿಸುತ್ತದೆ.

**ಕೋಷ್ಟಕ ಸಂಖ್ಯೆ-೨.೮**

**ಹೆಣ್ಣು ಮಕ್ಕಳ ಶಿಕ್ಷಣದ ಅಗತ್ಯತೆ**

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹೌದು | ೧೦೦ | ೧೦೦ |
| ೨ | ಇಲ್ಲ | ೦ | ೦ |
| ಒಟ್ಟು | | ೧೦೦ | ೧೦೦ |




ಈ ಕೋಷ್ಟಕ ತಿಳಿಯಪಡಿಸುವುದೇನೆಂದರೆ ಕೊರಗ ಸಮುದಾಯದಲ್ಲಿ ಹೆಣ್ಣು ಮಕ್ಕಳು-ಗಂಡು ಮಕ್ಕಳು ಎಂಬ ತಾರತಮ್ಯ ಮಾಡುವುದಿಲ್ಲ. ಗಂಡು ಮಕ್ಕಳಿಗೆ ಶಿಕ್ಷಣ ಎಷ್ಟು ಅಗತ್ಯವೋ ಅಷ್ಟೇ ಹೆಣ್ಣು ಮಕ್ಕಳಿಗೂ ಶಿಕ್ಷಣದ ಅಗತ್ಯತೆ ಇದೆ ಎಂದು ಭಾವಿಸಿದ್ದಾರೆ. ಇವರಲ್ಲಿ ಹೆಣ್ಣು ಮಕ್ಕಳಿಗೆ ವಿಶಿಷ್ಟವಾದ ಸ್ಥಾನಮಾನವಿದೆ. ಆದ್ದರಿಂದ ಈ ಅಧ್ಯಯನದಲ್ಲಿ ೧೦೦% ಕೊರಗ ಮಹಿಳೆಯರು ಹೆಣ್ಣು ಮಕ್ಕಳಿಗೂ ಶಿಕ್ಷಣದ ಅಗತ್ಯ ಇದೆ ಎಂದು ಭಾವಿಸಿದ್ದಾರೆ. ಹಾಗಾಗಿ ಯಾವ ಹೆಣ್ಣು ಮಗುವೂ ಶಿಕ್ಷಣದಿಂದ ವಂಚಿತರಾಗಲು ಸಾಧ್ಯವಿಲ್ಲ

## ಕೋಷ್ಟಕ ಸಂಖ್ಯೆ-೨.೯

### ನಿಮ್ಮ ಮಕ್ಕಳನ್ನು ಎಷ್ಟರ ತನಕ ಶಿಕ್ಷಣ ಕೊಡಲು ಇಷ್ಟಪಡುತ್ತೀರಾ

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಪ್ರಾಥಮಿಕ | ೦ | ೦ |
| ೨ | ಹೈಸ್ಕೂಲ್ | ೧೫ | ೧೫ |
| ೩ | ಪಿ.ಯು.ಸಿ. | ೪೦ | ೪೦ |
| ೪ | ಕಾಲೇಜು | ೪೫ | ೪೫ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕವು ತಿಳಿಯಪಡಿಸುವುದೇನೆಂದರೆ ೧೫% ಕೊರಗ ಸಮುದಾಯದ ಕುಟುಂಬದವರು ತಮ್ಮ ಮಕ್ಕಳಿಗೆ ಹೈಸ್ಕೂಲ್ ಹಂತದವರೆಗೆ ಮಾತ್ರ ವಿದ್ಯಾಭ್ಯಾಸವನ್ನು ಕೊಡುತ್ತಾರೆ ; ಕಾರಣ ಅವರಿಗಿರುವ ಬಡತನ. ಆರ್ಥಿಕ ಪರಿಸ್ಥಿತಿ ಉತ್ತಮವಿಲ್ಲದ ಕಾರಣ ತಮ್ಮ ಮಕ್ಕಳಿಗೆ ಫ್ರೌಢಶಿಕ್ಷಣವನ್ನು ಮಾತ್ರ ಕೊಡಿಸುವಲ್ಲಿ ಶಕ್ತ್ಯರಾಗಿರುತ್ತಾರೆ. ೪೦% ಕೊರಗ ಸಮುದಾಯದವರು ತಮ್ಮ ಮಕ್ಕಳಿಗೆ ಪಿ.ಯು.ಸಿ. ಹಂತದವರೆಗೆ ಶಿಕ್ಷಣವನ್ನು ಕೊಡಿಸಲು ಇಷ್ಟಪಡುತ್ತಾರೆ. ಅಂತೆಯೇ ೪೫% ಜನರು ಪದವಿ ಹಂತದವರೆಗೆ ಶಿಕ್ಷಣವನ್ನು ಕೊಡಿಸಲು ಇಷ್ಟಪಡುತ್ತಾರೆ. ಆದರೆ ಕಾಲೇಜು ತನಕ ಓದುವವರ ಸಂಖ್ಯೆ ತುಂಬಾ ವಿರಳ. ಇದಕ್ಕೆ ಮುಖ್ಯ ಕಾರಣ ಅವರಲ್ಲಿರುವ ಕೀಳರಿಮೆ ಹಾಗೂ ಬೇರೆ ಧರ್ಮದ ಜನರಲ್ಲಿರುವ ಅಸ್ಪೃಶ್ಯತೆಯ ಮನೋಭಾವನೆಯಿಂದಾಗಿ ಮಕ್ಕಳಲ್ಲಿಓದುವ ಮನಸ್ಸು ಇಲ್ಲದಂತಾಗುತ್ತದೆ. ಅಲ್ಲದೆ ಕಾಲೇಜು ತನಕ ಶಿಕ್ಷಣವನ್ನು ಪಡೆಯಲು ಮನೆಯ ಪರಿಸ್ಥಿತಿ ಉತ್ತಮವಾಗಿರದ ಕಾರಣ ಮಕ್ಕಳು ಓದಲು ಹಿಂದೇಟು ಹಾಕುತ್ತಾರೆ ಎಂದು ತಿಳಿದುಕೊಳ್ಳಬಹುದಾಗಿದೆ.

## ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿ

ಕೊರಗ ಸಮುದಾಯದ ಸಾಮಾಜಿಕ ಪರಿಸ್ಥಿತಿಯನ್ನು ಗಮನಿಸಿದಾಗ ನಾವು ಹಲವಾರು ಅಂಶಗಳನ್ನು ಕಂಡುಕೊಳ್ಳಬಹುದು.

**ದೈವಾರಾಧನೆ:-**

ದೈವಾರಾಧನೆ ಅಥವಾ ಭೂತ ನಾಗಗಳ ಆರಾಧನೆ ತುಳುನಾಡಿನ ವಿಶಿಷ್ಟ ಸಂಸ್ಕೃತಿ. ಇವರು ಪಂಜುರ್ಲಿ ಮತ್ತು ನಾಗದೇವರನ್ನು ಆರಾಧಿಸುತ್ತಾರೆ. ಕೊರಗರು ಇರುವ ಕೊಟ್ಟದ ಭೂಮಿಯಲ್ಲಿ ಈ ದೈವಗಳು ಇರುತ್ತದೆ. ಈ ದೈವಗಳ ಅರ್ಚನೆಯನ್ನು ಕೊರಗರೇ ಮಾಡುತ್ತಾರೆ. ತುಳುನಾಡಿನ ನೆಲದ ಸಂಸ್ಕೃತಿಯಲ್ಲಿ ಹಿಂದೆ ಮೂರ್ತಿ ಪೂಜೆ ಇರಲಿಲ್ಲ. ಮರದಡಿಯಲ್ಲಿ ಪೂಜಿಸುತ್ತಿದ್ದರು. ಆ ಮೇಲೆ ಸಾಂಕೇತಿಕ ಕಲ್ಲು ಇಟ್ಟರು. ಮೇಲ್ವರ್ಗದವರಲ್ಲಿ ಇರುವಂತೆ ಕೊರಗರಲ್ಲೂ ಜುಮಾದಿಯಂತಹ ಕೆಲವು ದೈವಗಳು ಇವೆ. ಏಳು ಕೊಪ್ಪದ ಗುರಿಕಾರನ ಮಗ ಹಾಗೆಯೇ ಬಹಳ ಹಿಂದಿನಿಂದಲೇ ಸೂರ್ಯನ ಆರಾಧಕರು. ಅನಂತರದ ದಿನಗಳಲ್ಲಿ ಕೊರಗ ತನಿಯ ದೈವವನ್ನು ಹೆಚ್ಚಿಗೆ ಆರಾಧಿಸುವರು. ತನಿಯ ಕೊರಗ ದೈವವಾದ "ಕೊರಗ ತನಿಯ" ಈಗ ಕೊರಗಜ್ಜ ಕೊರಗ ಸ್ವಾಮಿ ಆಗಿ ಎಲ್ಲ ವರ್ಗದವರಿಂದ ಆರಾಧನೆ ಪಡೆಯುತ್ತಾನೆ.

**ಕಂಬಳ ಮತ್ತು ಕೊರಗರು:-**

ಕೊರಗರಿಗೆ ಸಂಬಂಧಿಸಿ ಕಂಬಳವು ಪ್ರಧಾನವಾಗಿದೆ. ಕಂಬಳದ ಮೊದಲೇ ಇವರು ಡೋಲು ಬಡಿಯುತ್ತಾ ಇಡೀ ಊರಿನಲ್ಲಿ ಮನೆಮನೆಗೂ ಕಂಬಳದ ಹೇಳಿಕೆಯನ್ನು ತಲುಪಿಸುತ್ತಾರೆ. ಕಂಬಳದ ಸಂದರ್ಭದಲ್ಲಿ ಇವರ ಸಾಮೂಹಿಕ ಡೋಲು ನೃತ್ಯ ಕೂಡ ಇರುವುದನ್ನು ಕಾಣಬಹುದು.

**ಧರ್ಮ:-**

ಅನಾದಿ ಕಾಲದಿಂದಲೂ ಧರ್ಮದ ಬಗ್ಗೆ ಯಾವುದೇ ಗೊಂದಲವಿದ್ದಿರಲಿಲ್ಲ. ಅವರಿಗೆ ಯಾವುದೇ ಧರ್ಮದ ಹೆಸರು ಕೂಡ ಗೊತ್ತಿರಲಿಲ್ಲ. ಪ್ರಕೃತಿಯೊಡನೆ ಅನ್ಯೋನ್ಯ ಒಡನಾಟ, ಸತ್ಯ ನಿಷ್ಠೆಗಳೇ ನಮ್ಮ ಧರ್ಮ. ಹಿರಿಯರಿಗೆ ಗೌರವ, ಕಿರಿಯರಿಗೆ ಪ್ರೀತಿ ಇದೇ ಸಂಸ್ಕೃತಿ. ಈಗಿನ ಭಾಷೆಯಲ್ಲಿ ಹೇಳುವುದಾದರೆ ಅವರದು ಪ್ರಕೃತಿ ಧರ್ಮ. ಯಾಕೆಂದರೆ ಕಾಡಿನಲ್ಲಿ ಬುಟ್ಟಿ ಮಾಡಲು ಬಿಳಲು ತೆಗೆಯುವಾಗಲೂ, ಕಾಡಿನ ಇತರ ಮರಗಳಿಗೆ ತೊಂದರೆಯಾಗದಂತೆ ಜಾಗೃತಿ ವಹಿಸುತ್ತಿದ್ದೆವು. ಬೇಕಾದಷ್ಟು ಗಾತ್ರದ ತುಂಡು ತೆಗೆದು ಬುಡವನ್ನು ಹಾಗೇ ಬೆಳೆಯಲು ಬಿಡುತ್ತಿದ್ದೆವು.

ಕೊರಗರದ್ದು ಮಾತೃ ಪರಂಪರೆಯ ಸಮುದಾಯ. ಹೆಣ್ಣಿಗೆ ಪ್ರಾಧಾನ ಆದ್ಯತೆ. ಹೆಣ್ಣು ಹುಟ್ಟಿದರೆ ನಮ್ಮಲ್ಲಿ ಸಂಭ್ರಮ. ಪೀಳಿಗೆ ಕುಡಿ ಹೆಣ್ಣು ಎಂಬ ವಾಸ್ತವದ ಅರಿವು ಜನರಲ್ಲಿತ್ತು. ಮದುವೆಯೂ ಹೆಣ್ಣಿನ ಮನೆಯಲ್ಲೇ ನಡೆಯುತ್ತಿತ್ತು ಮತ್ತು ಮನೆಯ ಅಧಿಕಾರವೆಲ್ಲಾ ಮಾತೃ ಮೂಲಕ್ಕೆ ವರ್ಗಾವಣೆಯಾಗುತ್ತಿತ್ತು. ಬಳಿಗಳ ಪರಿಕಲ್ಪನೆ ನಮ್ಮಲ್ಲಿದೆ. ಅಂದರೆ ಒಂದೇ ಬಳಿಯವರು ರಕ್ತಸಂಬಂಧಿಗಳಾಗುತ್ತಾರೆ. ಮತ್ತು

ಬಳಿಯೊಳಗಿನ ಮದುವೆ ನಿಷಿದ್ಧವಾಗಿದೆ. ಇವರ ಸಮುದಾಯದಲ್ಲಿ ಐದು ಬಳಿಗಳಿದ್ದು ಪ್ರಾದೇಶಿಕವಾಗಿ ಭಾಷಾ ಭಿನ್ನತೆಯಿಂದಾಗಿ ಬೇರೆ-ಬೇರೆ ಹೆಸರುಗಳಿಂದ ಈ ಬಳಿಗಳನ್ನು ಗುರುತಿಸಲಾಗಿದೆ.

ಕೊರಗ ಮಹಿಳೆಯರ ಹೆರಿಗೆ ಹಿಂದೆ ಮನೆಯಲ್ಲಿಯೇ ಆಗುತ್ತಿತ್ತು. ಹೆರಿಗೆ ಮಾಡಿಸುವ ವಿಶೇಷ ಪರಿಣತಿ ಪಡೆದ ಮಹಿಳೆಯರು ಅವರಲ್ಲಿದ್ದರು. ಮಗು ಹುಟ್ಟಿದ ಮೇಲೆ ತಂದೆ ಎಲ್ಲ ಜವಾಬ್ದಾರಿಯನ್ನು ಹೊರಬೇಕಾಗುತ್ತಿತ್ತು. ಒಂದು ತಿಂಗಳ ತಾಯಿ, ಮಗುವಿನ ಖರ್ಚನ್ನು ಹೆಂಡ್ತಿ ಮನೆಗೆ ಗಂಡನಾದವನು ಭರಿಸಬೇಕಾಗಿತ್ತು. ಇದರಿಂದ ಹೆಣ್ಣಿಗೆ ಗಂಡಿಗಿಂತ ಹೆಚ್ಚಿನ ಪ್ರಾಮುಖ್ಯತೆ ಇರುವುದನ್ನು ಕಾಣಬಹುದು.

**ಮದುವೆ:-**

ಕೊರಗ ಜನಾಂಗದವರಲ್ಲಿ ಐದು ದಿನಗಳವರೆಗೆ ಮದುವೆ ಮಾಡುವ ಕ್ರಮವಿತ್ತು. ಮದುವೆಯಲ್ಲಿ ಗುರಿಕಾರ ಅಥವಾ ಕೊಡ್ತರೇ ಮುಖ್ಯಸ್ಥ. ಮೊದಲನೆಯ ದಿನ ಸಂಜೆ ಕುಟುಂಬದವರು ಹಾಗೂ ಹತ್ತಿರದ ನೆಂಟರಿಷ್ಟರೆಲ್ಲಾ ಸೇರುತ್ತಾರೆ. ಬಂದವರ ಕೈಕಾಲಿಗೆ ನೀರುದಾಗಿ ಬಾಯಾರಿಕೆ ಪೂರೈಸಿದ ಬಳಿಕ ನಡೆಯುವ ಒಂದು ವಿಶಿಷ್ಟವಾದ ಮತ್ತು ಆತ್ಮೀಯವಾದ ಕುಶಲೋಪಚಾರ ನಡೆಸುವ ಸಂಭಾಷಣೆಯೊಂದು ಇರುತ್ತದೆ. ಮದುಮಕ್ಕಳ ಶೃಂಗಾರದ ಬಳಿಕ ಇಬ್ಬರನ್ನು ಸಹಾಯಕ ಸಂಗಡಿಗರು ಎದುರು-ಬದುರು ಮುಖ ಮಾಡಿಸಿ ನಿಲ್ಲಿಸುತ್ತಾರೆ. ಅಕ್ಕ-ಪಕ್ಕದಲ್ಲಿ ಹೆತ್ತವರು ಇರುತ್ತಾರೆ. ಹುಡುಗನು ಹುಡುಗಿಗೆ ಕಪ್ಪು ಮಣಿಯನ್ನು ಕಟ್ಟುತ್ತಾನೆ. ಇಲ್ಲಿಗೆ ದಾಂಪತ್ಯಕ್ಕೆ ಮದುಮಕ್ಕಳು ಪ್ರವೇಶಿಸಿದಂತಾಗುತ್ತದೆ. ನಂತರ ಅಂಗಳದ ಬದಿಯ ತೆಂಗಿನ ಮರದ ಬುಡದಲ್ಲಿ ಮದುಮಕ್ಕಳ ತಲೆಗೆ ಹೆತ್ತವರು ದಾರೆ ನೀರು ಹೊಯ್ಯುವುದು ಕ್ರಮ. ನಂತರ ಮದುವೆಯ ಸಹಭೋಜನ ನಡೆಯುತ್ತದೆ. ಭೋಜನವು ಮಾಂಸಾಹಾರಿಯಾಗಿರುತ್ತದೆ. ಮದುವೆಯ ಮರುದಿನ ಮಧ್ಯಾಹ್ನ ಊಟದ ಬಳಿಕ ಮದುಮಗಳನ್ನು ಮದುಮಗನ ಮನೆಗೆ ಕರೆದುಕೊಂಡು ಹೋಗುವರು. ಆಗ ಲಯಬದ್ಧವಾದ ದೋಲುವಾದನ ಮದುಮಕ್ಕಳ ಕಣ್ಣಲ್ಲಿ ನೀರು ತರಿಸುತ್ತಿತ್ತು. ಆ ರಾತ್ರಿ ಮದುಮಗನ ಮನೆಯಲ್ಲಿ ಹಸೆ ಅಕ್ಕಿ ಹಾಕಿ ಮದುಮಕ್ಕಳನ್ನು ಆಶೀರ್ವದಿಸುವ ಕಾರ್ಯಕ್ರಮವಿರುತ್ತದೆ. ಅಲ್ಲಿಗೆ ಮದುವೆ ಮುಗಿಯುತ್ತದೆ.

**ಮರುಮದುವೆ:-**

ಕೊರಗ ಸಮುದಾಯದಲ್ಲಿ ವಿಧವಾ ವಿವಾಹ ಹಾಗೂ ವಿಧುರ ವಿವಾಹ ಎರಡೂ ನಡೆಯಲು ಅವಕಾಶವಿದೆ. ಇದಕ್ಕೇ ಅವರ ಭಾಷೆಯಲ್ಲಿ "ಕೈಪತ್ತಿನದು" ಎಂದು ಕರೆಯುತ್ತಾರೆ.

**ಮರಣ:-**

ಕೊರಗರ ಸಮುದಾಯಲ್ಲಿ ಸಾವು ಸಂಭವಿಸಿದರೆ, ತಕ್ಷಣ ಗುರಿಕಾರ ಎಲ್ಲರಿಗೂ ಸುದ್ದಿ ಮುಟ್ಟಿಸುತ್ತಾರೆ. ನಂತರ ಹೆಣವನ್ನು ದಕ್ಷಿಣಕ್ಕೆ ತಲೆ ಮಾಡಿ ಮಲಗಿಸುತ್ತಾರೆ. ಹೆಣದ ತಲೆಯ ಪಕ್ಕದಲ್ಲಿ ಚಿಮಣಿ ದೀಪ ಇಡುತ್ತಾರೆ. ಸತ್ತವನ ಆತ್ಮವು ಆಕಾಶದಲ್ಲಿ ಲೀನವಾಗಲಿ ಎಂಬ ನಂಬಿಕೆಯಿಂದ ಹೆಣದ ಮುಖವನ್ನು ನೇರವಾಗಿ ಮನೆಯ ಛಾವಣಿಯ ತೂತನ್ನು ನೋಡುವಂತೆ ಅಲ್ಲಿ ಒಂದು ಸಣ್ಣ ತೂತು ಮಾಡಿ ಗಾಳಿ ಒಳ- ಹೊರಗೆ ಹೋಗುವಂತೆ ಮಾಡುತ್ತಾರೆ. ಗುರಿಕಾರ ನೇತೃತ್ವದಲ್ಲಿ ಹೆಣ ಹೂಳಲು ಬೇಕಾದ ಜಾಗ ನೋಡುತ್ತಾರೆ. ಸಂಬಂಧಪಟ್ಟವರು ಸೇರಿದ ಕೂಡಲೇ ಕೊಡ್ತರು, ಸತ್ತ ವ್ಯಕ್ತಿಯ ಮಕ್ಕಳಿಗೆ ಗುದ್ದಲಿ

ಕೊಡುತ್ತಾರೆ. ಆತನ ಆದೇಶದಂತೆ ಇವರು ನೆಲದಲ್ಲಿ ಮೂರು ಗುರುತು ಹಾಕುತ್ತಾರೆ. ಆ ನಂತರ ಇತರರು ಸೇರಿ ಒಂದು ಆಳದ ಹೊಂಡ ತೋಡುತ್ತಾರೆ.

ನೆಂಟರಿಷ್ಟರು ಸೇರಿದ ಬಳಿಕ ಹೆಣಕ್ಕೆ ಸ್ನಾನ ಮಾಡಿಸುವುದು ಪದ್ಧತಿ. ಹಲಸಿನ ತೊಗಟೆ ಹಾಕಿ ಬಿಸಿ ಮಾಡಿದ ನೀರಿನಲ್ಲಿ ಅರಿಶಿಣ ಹಚ್ಚಿ ಹೆಣಕ್ಕೆ ಸ್ನಾನ ಮಾಡಿಸಲಾಗುತ್ತದೆ (ನೀರು ಸವರುವುದು). ಅಂತಿಮವಾಗಿ ಗುರಿಕಾರ ಕ್ರಿಯೆಯನ್ನು ಕೊನೆಗೊಳಿಸುತ್ತಾರೆ. ನಂತರ ಚಾಪೆಯಲ್ಲಿ ಹೆಣವನ್ನು ಸುತ್ತಿ ಓತನದಿಂದ ಹೊಂಡದಲ್ಲಿ ಹಗ್ಗಗಳ ಮೂಲಕ ಇಳಿಸಿ, ಮೊದಲು ಮಕ್ಕಳು ಮಣ್ಣು ಹಾಕುತ್ತಾರೆ. ಮರ್ಯಾದೆಗನುಗುಣವಾಗಿ ಇತರರು ಹೊಂಡಕ್ಕೆ ಮಣ್ಣು ಹಾಕುತ್ತಾರೆ. ಕೊನೆಗೆ ವೀಳ್ಯದೆಲೆ ಇಟ್ಟು ನಿಶ್ಚಿತ ಉತ್ತರಕ್ರಿಯೆಗಾಗಿ ಸತ್ತ ವ್ಯಕ್ತಿಯನ್ನು ಆಹ್ವಾನಿಸಿ ಹಿಂದಿರುಗುತ್ತಾರೆ. ನಂತರ ಮನೆಗೆ ಅರಿಶಿಣ ಬೆರೆಸಿದ ನೀರನ್ನು ಹಲಸಿನ ಎಲೆಯಲ್ಲಿ ಎರಚಿ ನೆರೆದವರನ್ನು ಶುದ್ಧಗೊಳಿಸುವರು. ಹಲಸಿನ ಎಲೆ ಎಲ್ಲಾ ಸಂದರ್ಭದಲ್ಲಿ ಪವಿತ್ರ ಎಂಬ ಭಾವನೆ ಅವರಲ್ಲಿದೆ.

ಹೆಣ ಹೂತು ೪೨ ದಿನ ದಾಟಿದ ಬಳಿಕ ಅಂದರೆ, ಒಂದು ಸಂಕ್ರಮಣ, ಒಂದು ಅಮಾವಾಸ್ಯೆ ಹಾಗೂ ಒಂದು ಹುಣ್ಣಿಮೆ ದಾಟಿದ ಮೇಲೆ ಉತ್ತರ ಕ್ರಿಯೆ ನಡೆಸುವುದು ನಮ್ಮ ಸಂಪ್ರದಾಯ. ರಾತ್ರಿ ಸತ್ತವರನ್ನು ಹಿರಿಯರೊಟ್ಟಿಗೆ(ಅಂದರೆ ಮೊದಲು ಸತ್ತವರೊಂದಿಗೆ) ಸೇರಿಸುವ ಕ್ರಮವಿದೆ. ಆ ಸಂದರ್ಭದಲ್ಲಿ ಸತ್ತ ವ್ಯಕ್ತಿ ತಿನ್ನುತ್ತಿದ್ದ ಯಾವುದಾದರೂ ಒಂದು ಬಗೆಯ ಮಾಂಸದ ಅಡುಗೆ ಅಗತ್ಯವಿರುತ್ತದೆ.

**ಗುರಿಕಾರ ಪದ್ಧತಿ ಮತ್ತು ನ್ಯಾಯ ಪದ್ಧತಿ:-**

ಕೊರಗ ಸಮುದಾಯದಲ್ಲಿ ಒಂದು ಕುಟುಂಬಕ್ಕೆ ಒಬ್ಬ ಗುರಿಕಾರ ಇರುತ್ತಾರೆ. ಆ ಗುರಿಕಾರ ತನ್ನ ಕುಟುಂಬದಲ್ಲಿ ನಡೆಯುವ ಹುಟ್ಟು, ಸಾವು, ಮದುವೆ ಮತ್ತು ನಂಬಿಕೆಯ ಆಚರಣೆಗಳಲ್ಲಿ ನಾಯಕತ್ವ ವಹಿಸಿಕೊಳ್ಳುತ್ತಾರೆ. ಕೊರಗ ಸಮುದಾಯದಲ್ಲಿಅವರದ್ದೆ ಆದ ನ್ಯಾಯಪದ್ದತಿ ಇದ್ದು ಆಯಾ ಕುಟುಂಬದ ಗುರಿಕಾರರಿಗೆ ನ್ಯಾಯ ತೀರ್ಮಾನ ಮಾಡಲಾಗುತ್ತದೆ.

**ಕೊರಗ ಸಮುದಾಯದ ನಂಬುಗೆಗಳು:-**

ಮೂಲತಃ ಕೊರಗರು ಪ್ರಕೃತಿಯ ಆರಾಧಕರು ಮತ್ತು ಪ್ರಕೃತಿಯೊಡನೆ ಹೊಂದಾಣಿಕೆಯಿಂದ ಬದುಕಿದವರು. ಭೂಮಿ, ಗಾಳಿ, ಸೂರ್ಯ, ಚಂದ್ರರ ಮೇಲೆ ವಿಶೇಷ ನಂಬಿಕೆಯಿದೆ ಅವರು ಕಷ್ಟದ ಕಾಲದಲ್ಲಿ ತಮ್ಮ ಮನೆದೈವದ, ಅದರಲ್ಲೂ ವಿಶೇಷವಾಗಿ ಕೊರಗಜ್ಜನ ಮೊರೆ ಹೋಗುತ್ತಿದ್ದರು. ಹುಟ್ಟು ಸಾವಿನ ಆಚರಣೆಗಳು ತುಂಬಾ ಸರಳವಾಗಿದ್ದು, ಅವರ ಪೂರ್ವಜರು ಹುಟ್ಟಿದ ಮಕ್ಕಳಿಗೆ ತಮ್ಮ ಹಿರಿಯರ ಪ್ರಾಣಿಗಳ, ದಿನಗಳ ಹೆಸರಿಡುತ್ತಿದ್ದರು. ಸತ್ತವರು ಮತ್ತೆ ತಮ್ಮ ಬಳಿ ಬರುತ್ತಾರೆ ಅನ್ನುವ ನಂಬಿಕೆ ಇದೆ. ವಿಶೇಷ ಸಂದರ್ಭಗಳಲ್ಲಿ ಸತ್ತವರನ್ನು ನೆನಪಿಸಿ ಎಲೆಯಲ್ಲಿ ಊಟ ಬಡಿಸುವ ಪದ್ದತಿ ಇದೆ. ಅವರ ದೈವಗಳಿಗೆ ಮಹಿಳೆಯರು ಯಾವತ್ತು ಮೈಲಿಗೆ ಅಲ್ಲ ಎಂದು ನಂಬಿದ್ದಾರೆ.

**ಕೊರಗರಲ್ಲಿ ಮನರಂಜನೆ ಮತ್ತು ಸಂಗಿತ:-**

ಇರಣ ಮತ್ತು ಕರಂಡೆ ಎಂಬುದು ವಿಶಿಷ್ಟ ತರಹದ ವಾದ್ಯಗಳು.ಇದಲ್ಲದೆ ಇವರ ಸಾಂಸ್ಕೃತಿಕ ಕಲಾವಂತಿಕೆಯ ಸಂಕೇತಿಕವಾಗಿ ಕೊಳಲು ಮತ್ತು ಡೋಲು ಇದೆ. ಅಲ್ಲದೆ ತಾಳ ಮತ್ತು ಚಂಡೆಯು ಬಳಸಲ್ಪಡುತ್ತದೆ ಆಧುನಿಕ ಬದಲಾವಣೆಗೆ ಸಿಕ್ಕಿ ಕರಂಡೆ ಮತ್ತು ಈರಣ ಈಗ ಕಡಿಮೆಯಾಗಿದೆ. ಆದರೆ ಉಳಿದವುಗಳನ್ನು ಇಂದಿಗೂ ಕಾಣಬಹುದು. ಕೊರಗರು ಹೆಚ್ಚಾಗಿ ಡೋಲನ್ನು ಬಾರಿಸುತ್ತಾರೆ. ಅವರು ಡೋಲನ್ನು ಕಂಬಳ, ಗ್ರಾಮದ ಹಬ್ಬ ಮತ್ತು ಅವರು ಇರುವ ಸ್ಥಳದಲ್ಲಿ ಹೆಚ್ಚಾಗಿ ಮನಂಜನೆಗಳಿಗಾಗಿ ಬಾರಿಸುತ್ತಾರೆ.

ಕೊರಗರು ಈ ವಾದ್ಯೋಪಕರಣಗಳನ್ನು ಶುಭ ಮತ್ತು ಅಶುಭ ಸಂದರ್ಭಕ್ಕೆ ತಕ್ಕಂತೆ ಈ ವಾದ್ಯೋಪಕರಣಗಳ ಲಯ, ತಾಳ, ಬಡಿತ ವ್ಯತ್ಯಾಸವಾಗಿರುತ್ತದೆ.

## ಕೋಷ್ಟಕ ಸಂಖ್ಯೆ-೩.೧

## ಕೊರಗ ಮಹಿಳೆಯರ ವೈವಾಹಿಕ ಸ್ಥಾನಮಾನ

| ಕ್ರ.ಸಂ | ವೈವಾಹಿಕ ಸ್ಥಾನಮಾನ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ವಿವಾಹಿತೆ | ೬೭ | ೬೭ |
| ೨ | ಅವಿವಾಹಿತೆ | ೨೦ | ೨೦ |
| ೩ | ವಿಧವೆ | ೧೩ | ೧೩ |
| ೪ | ವಿಚ್ಛೇದಿತೆ | ೦ | ೦ |
| ಒಟ್ಟು | | ೧೦೦ | ೧೦೦ |

ಈ ಮೇಲಿನ ಕೋಷ್ಟಕವನ್ನು ನೋಡಿ ಹೇಳುವುದಾದರೆ ೧೦೦ ಮಾಹಿತಿದಾರರ ಸಂಖ್ಯೆಯಲ್ಲಿ ೬೭% ಮಹಿಳೆಯರು ವಿವಾಹಿತರಾಗಿದ್ದಾರೆ. ೨೦% ಮಹಿಳೆಯರು ಅವಿವಾಹಿತರಾಗಿದ್ದಾರೆ. ೧೩% ಮಹಿಳೆಯರು ವಿಧವೆಯಾಗಿದ್ದಾರೆ. ಈ ಅಧ್ಯಯನದಲ್ಲಿ ತಿಳಿಸುವುದೇನೆಂದರೆ ಹೆಚ್ಚಿನ ಸಂಖ್ಯೆಯ ಮಹಿಳೆಯರು ವಿವಾಹಿತರಾಗಿದ್ದು ವೈವಾಹಿಕ ಜೀವನವನ್ನು ನಡೆಸುತ್ತಿದ್ದಾರೆ. ಅಲ್ಲದೆ ಹೆಚ್ಚಿನ ಮಹಿಳೆಯರು ಅನಕ್ಷರಸ್ಥರಾಗಿದ್ದಾರೆ.

### ಕೋಷ್ಟಕ ಸಂಖ್ಯೆ-೩.೨

### ಕೊರಗ ಮಹಿಳೆಯರ ಕುಟುಂಬದ ಗಾತ್ರ

| ಕ್ರ.ಸಂ | ಕುಟುಂಬದ ಗಾತ್ರ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಎರಡು ಮಂದಿ | ೫ | ೫ |
| ೨ | ೩-೫ | ೬೦ | ೬೦ |
| ೩ | ೬-೮ | ೩೪ | ೩೪ |
| ೪ | ೯ ಅದಕ್ಕಿಂತ ಹೆಚ್ಚು | ೧ | ೧ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕದಲ್ಲಿ ವಿವರಿಸುವುದೇನೆಂದರೆ ೫% ಒಂದು ಮನೆಯಲ್ಲಿ ಎರಡು ಮಂದಿ ವಾಸಿಸುತ್ತಿದ್ದಾರೆ. ೬೦% ಒಂದು ಮನೆಯಲ್ಲಿ ೩ರಿಂದ ೪ ಜನರು ವಾಸಿಸುತ್ತಿದ್ದಾರೆ. ಮತ್ತು೩೪% ಕೊರಗ ಸಮುದಾಯದವರು ಒಂದು ಮನೆಯಲ್ಲಿ ೬ರಿಂದ ೮ ಜನ ವಾಸಿಸುತ್ತಿದ್ದಾರೆ. ಕೇವಲ ೧% ಜನರು ಮಾತ್ರ ಒಟ್ಟಿಗೆ ೯ ಒಂದೇ ಮನೆಯಲ್ಲಿ ವಾಸಿಸುತ್ತಿದ್ದಾರೆ.

## ಕೋಷ್ಟಕ ಸಂಖ್ಯೆ-೩.೩

## ವಾಸವಾಗಿರುವ ಪ್ರದೇಶ

| ಕ್ರ.ಸಂ | ವಾಸವಾಗಿರುವ ಪ್ರದೇಶ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಗ್ರಾಮ | ೪೭ | ೪೭ |
| ೨ | ಕಾಡು | ೨೬ | ೨೬ |
| ೩ | ನಗರ | ೦ | ೦ |
| ೪ | ಪಟ್ಟಣ | ೨೭ | ೨೭ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕದಲ್ಲಿ ನೋಡಬಹುದೇನೆಂದರೆ ೪೭% ಕೊರಗ ಸಮುದಾಯದವರು ಗ್ರಾಮದಲ್ಲಿ ವಾಸಿಸುತ್ತಿದ್ದಾರೆ. ೨೬% ಕೊರಗ ಸಮುದಾಯದವರು ಕಾಡಿನಲ್ಲಿ ವಾಸಿಸುತ್ತಿದ್ದಾರೆ. ೨೭% ಕೊರಗ ಸಮುದಾಯದವರು ಪಟ್ಟಣ ಪ್ರದೇಶದಲ್ಲಿ ವಾಸಿಸುತ್ತಿದ್ದಾರೆ.

ಈ ಅಧ್ಯಯನವು ತಿಳಿಸುವುದೇನೆಂದರೆ ಹೆಚ್ಚಿನ ಸಂಖ್ಯೆಯ ಕೊರಗ ಸಮುದಾಯದವರು ಅಂದರೆ ೪೭% ಜನರು ಗ್ರಾಮದಲ್ಲಿ ವಾಸಿಸುತ್ತಿದ್ದಾರೆ. ಪಂಚಾಯಿತಿಯಿಂದ ಸಿಗುವ ಸೌಲಭ್ಯವನ್ನು ಪಡೆಯುತ್ತಿದ್ದಾರೆ. ಗ್ರಾಮದಲ್ಲಿ ಮನೆಯನ್ನು ಕಟ್ಟಿಕೊಂಡು ವಾಸಿಸುತ್ತಿದ್ದಾರೆ. ಅದರಲ್ಲಿ ೨೬% ಜನರು ಕಾಡಿನಲ್ಲಿ ವಾಸಿಸುತ್ತಿದ್ದಾರೆ. ಹೆಚ್ಚಿನವರು ಅನಕ್ಷರಸ್ಥರಾಗಿರುವುದರಿಂದ ತಮಗೆ ಸಿಗುವ ಸೌಲಭ್ಯವನ್ನು ಪಡೆದುಕೊಳ್ಳುವಲ್ಲಿ ವಿಫಲರಾಗಿದ್ದಾರೆ ಎಂದು ಹೇಳಬಹುದು. ಹಿಂದಿನ ಕಾಲದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಾಡಿನಲ್ಲಿ ವಾಸಿಸುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ಅವರು ಕೂಡಾ ಸ್ವಲ್ಪ ಮಟ್ಟಿಗೆ ಮುಂದುವರಿದು ಗ್ರಾಮ, ಪಟ್ಟಣಗಳಲ್ಲಿ ಬಂದು ವಾಸಿಸುತ್ತಿದ್ದಾರೆ.

### ಕೋಷ್ಟಕ ಸಂಖ್ಯೆ-೩.೪

### ಮನೆಯಿಂದ ಪಟ್ಟಣಕ್ಕೆ ಇರುವ ಅಂತರ

| ಕ್ರ.ಸಂ | ಅಂತರ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ನಗರದ ಒಳಗೆ | ೮ | ೮ |
| ೨ | ೧-೨ ಕಿ.ಮೀ | ೫೧ | ೫೧ |
| ೩ | ೩-೪ ಕಿ.ಮೀ | ೩೮ | ೩೮ |
| ೪ | ೫-೬ ಕಿ.ಮೀ | ೩ | ೩ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕದಲ್ಲಿ ತಿಳಿಸುವುದೇನೆಂದರೆ ೮% ಕೊರಗ ಸಮುದಾಯವು ನಗರದ ಒಳಗೆ ವಾಸಿಸುತ್ತಿದ್ದಾರೆ. ೫೧% ಕೊರಗ ಸಮುದಾಯವು ಪಟ್ಟಣದಿಂದ ೨ ಕಿ.ಮೀ.ಗಿಂತ ಕಡಿಮೆ ಅಂತರದಲ್ಲಿ ವಾಸಿಸುತ್ತಿದ್ದಾರೆ. ೩೮% ಕೊರಗ ಸಮುದಾಯವು ಪಟ್ಟಣದಿಂದ ೩-೪ ಕಿ.ಮೀ. ಒಳಗೆ ವಾಸಿಸುತ್ತಿದ್ದಾರೆ. ಕೇವಲ ೩% ಜನರು ಮಾತ್ರ ಪಟ್ಟಣದಿಂದ ೫-೬ ಕಿ.ಮೀ.ದೂರದಲ್ಲಿ ವಾಸಿಸುತ್ತಿದ್ದಾರೆ.

## ಕೋಷ್ಟಕ ಸಂಖ್ಯೆ-೩.೫

### ಮನೆಯ ಒಡೆತನ

| ಕ್ರ.ಸಂ | ಮನೆಯ ಒಡೆತನ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಸ್ವಂತ | ೯೪ | ೯೪ |
| ೨ | ಬಾಡಿಗೆ | ೬ | ೬ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕದಲ್ಲಿ ತೋರಿಸುವುದೇನೆಂದರೆ ೯೪% ಕೊರಗ ಸಮುದಾಯದವರು ತಮ್ಮ ಸ್ವಂತ ಜಾಗದಲ್ಲಿ ಮನೆಯನ್ನು ನಿರ್ಮಿಸಿಕೊಂಡು ವಾಸಿಸುತ್ತಿದ್ದಾರೆ. ಅದರಲ್ಲಿ ೬% ಜನರು ಮಾತ್ರ ಬೇರೆಯವರ ,ಸರ್ಕಾರದ ಜಾಗದಲ್ಲಿ ಗುಡಿಸಲುಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದಾರೆ.

ಈ ಅಧ್ಯಯನವು ತಿಳಿಸುವುದೇನೆಂದರೆ ಹೆಚ್ಚಿನ ಕೊರಗ ಸಮುದಾಯದವರು ಸ್ವಂತ ಜಾಗದಲ್ಲಿ ಮನೆಯನ್ನು ಕಟ್ಟಿಕೊಂಡು ತಮ್ಮದೇ ಆದ ಜೀವನವನ್ನು ನಡೆಸುತ್ತಿದ್ದಾರೆ.

## ಕೋಷ್ಟಕ ಸಂಖ್ಯೆ-೩.೬

## ಕುಟುಂಬದ ವಿವರಗಳು

| ಕ್ರ.ಸಂ | ಕುಟುಂಬದ ವಿಧಗಳು | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ವಿಭಕ್ತ | ೯೩ | ೯೩ |
| ೨ | ಅವಿಭಕ್ತ | ೭ | ೭ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕದಲ್ಲಿ ತಿಳಿಸುವುದು ಏನೇಂದರೆ ೯೩% ಕೊರಗ ಸಮುದಾಯದ ಜನರು ವಿಭಕ್ತ ಕುಟುಂಬವನ್ನು ಹೊಂದಿದ್ದಾರೆ. ಕೇವಲ ೭% ಜನರು ಮಾತ್ರಅವಿಭಕ್ತ ಕುಟುಂಬದಲ್ಲಿ ವಾಸಿಸುತ್ತಿದ್ದಾರೆ.

ಈ ಅದ್ಯಯನವು ಹೇಳುವುದೇನೇಂದರೆ ಹೆಚ್ಚಿನ ಸಂಖ್ಯೆಯಲ್ಲಿ ಕೊರಗ ಸಮುದಾಯದವರು ವಿಭಕ್ತ ಕುಟುಂಬದಲ್ಲಿ ವಾಸಿಸುತ್ತಿದ್ದಾರೆ.ಅಂದರೆ ತಂದೆ ತಾಯಿ ಮಕ್ಕಳ ಜೊತೆ ವಾಸಿಸುತ್ತಿದ್ದಾರೆ. ಅವಿಭಕ್ತ ಕುಟುಂಬಗಳ ಸಂಖ್ಯೆ ಕಡಿಮೆ. ಕಾರಣ ಇತ್ತಿಚೀನ ಆಧುನಿಕ ಯುಗದಲ್ಲಿ ಕೆಲಸದ ಕಾರಣದಿಂದಲೂ,ಆಂತರಿಕ ಕಲಹದ ಕಾರಣದಿಂದ ಕೊರಗ ಸಮುದಾಯದ ಜನರು ವಿಭಕ್ತಕುಟುಂಬದಲ್ಲಿ ವಾಸಿಸುತ್ತಿದ್ದಾರೆ.

### ಕೋಷ್ಟಕ ಸಂಖ್ಯೆ-೩.೭

### ಉತ್ತಾರಾಧಿಕಾರದ ವಿಧಗಳು

| ಕ್ರ.ಸಂ | ಉತ್ತಾರಾಧಿಕಾರದ ವಿಧಗಳು | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಮಾತೃಪ್ರದಾನ | ೧೦೦ | ೧೦೦ |
| ೨ | ಪಿತೃಪ್ರದಾನ | ೦ | ೦ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕವು ತೋರಿಸುವುದೇನೆಂದರೆ ಕೊರಗ ಸಮುದಾಯದ ಎಲ್ಲಾ ಕುಟುಂಬದಲ್ಲಿ ೧೦೦% ಮಾತೃಪ್ರದಾನ ಕುಟುಂಬವಾಗಿದೆ. ಹೆಣ್ಣುಮಕ್ಕಳಿಗೆ ಹೆಚ್ಚಿನ ಆದ್ಯತೆ ನೀಡುತ್ತಾರೆ. ಹೆಣ್ಣು ಮಕ್ಕಳು ಹುಟ್ಟಿದರೆ ತುಂಬಾ ಸಂತೋಷ ಪಡುತ್ತಾರೆ. ಅವರ ವಂಶವು ಬೆಳೆಯಲು ಹೆಣ್ಣು ಮಕ್ಕಳು ಕಾರಣ ಎನ್ನುತ್ತಾರೆ. ಕೊರಗ ಸಮುದಾಯದಲ್ಲಿ ಮದುವೆಯು ಕೂಡ ಹೆಣ್ಣು ಮಕ್ಕಳ ಮನೆಯಲ್ಲಿಯೇ ನಡೆಯುತ್ತದೆ. ಕೊರಗ ಸಮುದಾಯದವರು ಹೆಣ್ಣು ಮಕ್ಕಳಿಗೆ ಪ್ರಮುಖವಾದ ಸ್ಥಾನಮಾನ ನೀಡುವುದರಿಂದ ಇವರ ಕುಟುಂಬವು ಮಾತೃಪ್ರದಾನವಾಗಿರುತ್ತದೆ.

### ಕೋಷ್ಟಕ ಸಂಖ್ಯೆ-೩.೮

### ಕುಟುಂಬದಲ್ಲಿ ಪಡಿತರ ಚೀಟಿ ಹೊಂದಿರುವವರ ಸಂಖ್ಯೆ

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹೌದು | ೯೦ | ೯೦ |
| ೨ | ಇಲ್ಲ | ೧೦ | ೧೦ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕದಲ್ಲಿ ವಿವರಿಸುವುದೇನೆಂದರೆ ಕೊರಗ ಸಮುದಾಯದ ೯೦% ಮನೆಗಳಲ್ಲಿ ಪಡಿತರ ಚೀಟಿಯನ್ನು ಹೊಂದಿರುತ್ತಾರೆ. ಅದರಲ್ಲಿ ೧೦% ಜನರಲ್ಲಿ ಪಡಿತರ ಚೀಟಿಯನ್ನು ಹೊಂದಿರುವುದಿಲ್ಲ

ಈ ಅಧ್ಯಯನವು ತಿಳಿಸುವುದೇನೆಂದರೆ ೯೦% ಜನರು ಪಡಿತರ ಚೀಟಿಯನ್ನು ಹೊಂದಿರುತ್ತಾರೆ ಅವರು ಸರ್ಕಾರದಿಂದ ಸಿಗುವ ಸೌಲಭ್ಯವನ್ನು ಪಡೆಯುತ್ತಿದ್ದಾರೆ. ಪಡಿತರ ಚೀಟಿಯಿಂದ ಸಿಗುವ ಅಕ್ಕಿ, ಗೋಧಿ, ಮುಂತಾದ ಆಹಾರ ಪದಾರ್ಥಗಳು ಅವರಿಗೆ ಸಿಗುತ್ತಿದೆ. ಆದರಿಂದ ಅವರ ಅರ್ಥಿಕ ಪರಿಸ್ಥಿತಿ ಸ್ವಲ್ಪ ಮಟ್ಟಿಗೆ ಸುಧಾರಿಸಿದೆ. ಆದರೆ ಕೆಲವರಲ್ಲಿ ಪಡಿತರ ಚೀಟಿಯನ್ನು ಹೊಂದಿಲ್ಲ ಕಾರಣ ಅವರು ತಮ್ಮ ಸ್ವಂತ ಜಾಗದಲ್ಲಿ ವಾಸಿಸದಿರುವುದರಿಂದ ಅವರಲ್ಲಿ ತಮ್ಮ ಜಾಗ ಸ್ವಂತ ಎಂದು ತೋರಿಸಲು ಯಾವುದೇ ದಾಖಲೆಗಳಿಲ್ಲದ ಕಾರಣ ಅವರು ಪಡಿತರ ಚೀಟಿಯನ್ನು ಪಡೆದುಕೊಳ್ಳಲು ವಿಫಲರಾಗಿದ್ದಾರೆ.

**ಕೋಷ್ಟಕ ಸಂಖ್ಯೆ-೩.೯**

**ಕೊರಗ ಸಮುದಾಯದಲ್ಲಿ ಶೌಚಲಯ ಹೊಂದಿರುವವರ ಸಂಖ್ಯೆ**

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹೌದು | ೬೨ | ೬೨ |
| ೨ | ಇಲ್ಲ | ೩೮ | ೩೮ |
| ಒಟ್ಟು | | ೧೦೦ | ೧೦೦ |

ಈ ಮೇಲಿನ ಕೋಷ್ಟಕವು ವಿವರಿಸುವುದು ಏನಂದರೆ ೬೨%ಕೊರಗ ಸಮುದಾಯದ ಮನೆಯಲ್ಲಿ ಶೌಚಲಯದ ವ್ಯವಸ್ತೆಯಿರುತ್ತದೆ. ಆದರೆ ಅದರಲ್ಲೂ ೩೮% ಮನೆಗಳಲಲ್ಲಿ ಶೌಚಲಯವಿಲ್ಲ ಎಂದು ಹೇಳಬಹುದು.

ಈ ಅದ್ಯಯನವು ಹೇಳುವುದೇನೆಂದರೆ ಕೊರಗ ಸಮುದಾಯದ ಹೆಚ್ಚಿನ ಮನೆಗಳಲ್ಲಿ ಅಂದರೆ ೬೨% ಜನರ ಮನೆಯಲ್ಲಿ ಶೌಚಲಯವಿರುತ್ತದೆ. ಇವರ ಅರ್ಥಿಕ ಪರಿಸ್ಥಿತಿ ಸ್ವಲ್ಪ ಮಟ್ಟಿಗೆ ಸುಧಾರಿಸಿದರಿಂದ ಮತ್ತು ಪಂಚಾಯತಿನಿಂದ ಶೌಚಲಯ ಕಟ್ಟಲು ಪ್ರತಿಯೊಂದು ಮನೆಗೂ ಧನ ಸಹಾಯ ೧೫೦೦೦ ರೂ ಕೊಡುತ್ತದೆ ಈ ಸೌಲಭ್ಯವನ್ನು ಉಪಯೋಗಿಸಿಕೊಂಡಿದ್ದರಿಂದ ಮತ್ತು ಈಗ ಪ್ರತಿಯೊಂದು ಮನೆಗೂ ಕಡ್ಡಾಯವಾಗಿ ಶೌಚಲಯ ಇರಲೇ ಬೇಕು ಎನ್ನುವ ಪಂಚಾಯತ್ ನ ನೀತಿಯಿಂದ ಹೆಚ್ಚಿನ ಮನೆಯಲ್ಲಿ ಶೌಚಲಯವನ್ನು ಕಾಣಬಹುದು. ಅದೇ ರೀತಿ ಕೆಲವು ಮನೆಯಲ್ಲಿ ಶೌಚಲಯ ಇಲ್ಲದಿರುವುದನ್ನು ಕಾಣಬಹುದು. ಕಾರಣ ತುಂಬಾ ಬಡತನ ಇರುವುದರಿಂದ ಆರ್ಥಿಕ ಪರಿಸ್ಥಿತಿ ಚೆನ್ನಾಗಿ ಇಲ್ಲದಿರುವುದು ಮತ್ತು ಅನಕ್ಷರಸ್ಥರಾಗಿರುವುದರಿಂದ ಪಂಚಾಯತ್ನಲ್ಲಿ ಸಿಗುವ ಸೌಲಭ್ಯವನ್ನು ಕೇಳಿ ಪಡೆದುಕೊಳ್ಳುವಲ್ಲಿ ವಿಫಲರಾಗಿದ್ದಾರೆ. ಆದರಿಂದ ಕೊರಗ ಸಮುದಾಯದಲ್ಲಿ ೧೦೦% ಶೌಚಲಯದ ವ್ಯವಸ್ಥೆ ಇಲ್ಲ ಎಂದು ಹೇಳಬಹುದು.

**ಕೋಷ್ಟಕ ಸಂಖ್ಯೆ-೩.೧೦**

**ಸಾರ್ವಜನಿಕ ದೇವಾಸ್ಥಾನಕ್ಕೆ ಪ್ರವೇಶ**

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹೌದು | ೦ | ೦ |
| ೨ | ಇಲ್ಲ | ೧೦೦ | ೧೦೦ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕವು ವಿವರಿಸುವುದೇನೆಂದರೆ ಕೊರಗ ಸಮುದಾಯದವರಿಗೆ ಸಾರ್ವಜನಿಕ ದೇವಾಸ್ಥಾನಕ್ಕೆ ಯಾರಿಗೂ ಪ್ರವೇಶವಿಲ್ಲ .ಕಾರಣ ಸಾಮಾಜಿಕ ಸ್ಥಾನಮಾನದಲ್ಲಿ ಅವರಿಗೆ ಅತ್ಯಂತ ಕೆಳಗಿನ ಸ್ಥಾನಮಾನವನ್ನು ನೀಡಿರುವುದರಿಂದ ಮತ್ತು ಅವರನ್ನು ಇತರ ಜಾತಿಯವರು ಅಸ್ಪೃಶ್ಯರು ಎಂದು ಪರಿಗಣಿಸಿದ್ದಾರೆ. ಅಲ್ಲದೆ ಅವರಲ್ಲಿ ಇರುವ ಕೀಳರಿಮೆ ಮನೋಭಾವನೆಯಿಂದಾಗಿ ಅವರು ದೇವಾಸ್ಥಾನಗಳಿಗೆ ಹೋಗಲು ನಿರಾಕರಿಸುತ್ತಾರೆ.

### ಕೋಷ್ಟಕ ಸಂಖ್ಯೆ-೩.೧೧

### ಕೊರಗ ಮಹಿಳೆಯರ ಮದುವೆಯ ವಯಸ್ಸು

| ಕ್ರ.ಸಂ | ವಯಸ್ಸು | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ೧೮ವರ್ಷದ ಒಳಗೆ | ೦ | ೦ |
| ೨ | ೧೯-೨೧ | ೬೦ | ೬೦ |
| ೩ | ೨೨-೨೪ | ೪೦ | ೪೦ |
| ೪ | ೩೫ರ ನಂತರ | ೦ | ೦ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕವು ವಿವರಿಸುವುದನೇಂದರೆ ೬೦% ಕೊರಗ ಸಮುದಾಯದ ಮಹಿಳೆಯರ ಮದುವೆಯ ವಯಸ್ಸು ೧೯ರಿಂದ ೨೧ ಅದರಲ್ಲಿ ೪೦% ಮಹಿಳೆಯರು ೨೨ರಿಂದ ೨೪ ರ ಒಳಗೆ ಮದುವೆ ಆಗುತ್ತಾರೆ. ಈ ಅದ್ಯಯನವು ತಿಳಿಸುವುದನೇಂದರೆ ಹೆಚ್ಚಿನ ಮಹಿಳೆಯರಿಗೆ ೧೯ರಿದ ೨೧ರ ವಯಸ್ಸಿನ ಒಳಗೆ ಮದುವೆಯಾಗುತ್ತದೆ. ಅದರೆ ಇಲ್ಲಿ ಗಮನಿಸಬೇಕಾದ ಅಂಶವೇನೇಂದರೆ ೧೮ ವರ್ಷದ ಒಳಗೆ ಹೆಣ್ಣು ಮಕ್ಕಳಿಗೆ ಮದುವೆಯನ್ನು ಮಡುವುದಿಲ್ಲ ಕೊರಗ ಮಹಿಳೆಯರ ಮದುವೆಯು ಹೆಣ್ಣುಮಕ್ಕಳ ಮನೆಯಲ್ಲಿ ನಡೆಸುತ್ತಾರೆ.

### ಕೋಷ್ಟಕ ಸಂಖ್ಯೆ-೩.೧೨

### ನಿಮ್ಮ ಸಮುದಾಯದಲ್ಲಿ ಪುನರ್ ವಿವಾಹಕ್ಕೆ ಅವಕಾಶವಿದೇಯೇ

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹೌದು | ೧೦೦ | ೧೦೦ |
| ೨ | ಇಲ್ಲ | ೦ | ೦ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕದಲ್ಲಿ ವಿವರಿಸುವುದೇನೇಂದರೆ ೧೦೦% ಕೊರಗ ಸಮುದಾಯದಲ್ಲಿ ಮಹಿಳೆಯರಿಗೆ ಪುನರ್ ವಿವಾಹಕ್ಕೆ ಅವಕಾಶವಿದೆ. ಯಾಕೆಂದರೆ ಹೆಣ್ಣಿಗೆ ಪ್ರಮುಖ ಪ್ರಾಧಾನ್ಯತೆಯನ್ನು ನೀಡುತ್ತಾರೆ. ಅವರ ಕುಟುಂಬ ಮಾತೃಕುಟುಂಬವಾಗಿರುತ್ತದೆ.

### ಕೋಷ್ಟಕ ಸಂಖ್ಯೆ-೩.೧೩

### ವರದಕ್ಷಿಣೆ ವಿನಿಮಯ ಮಾಡಿರುತ್ತಿರಾ

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹೌದು | ೮ | ೮ |
| ೨ | ಇಲ್ಲ | ೯೨ | ೯೨ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕವು ವಿವರಿಸುವುದು ಏನೆಂದರೆ ೯೨% ಕೊರಗ ಮಹಿಳೆಯರು ತಮ್ಮ ಮದುವೆಯಲ್ಲಿ ವರದಕ್ಷಿಣೆಯನ್ನು ವಿನಿಮಯ ಮಾಡಿರುವುದಿಲ್ಲ. ೮% ಮಹಿಳೆಯರು ಮಾತ್ರ ವರದಕ್ಷಿಣೆಯನ್ನು ವಿನಿಮಯ ಮಾಡಿರುತ್ತಾರೆ. ಈ ಅದ್ಯಯನವು ತೀಳಿಸುವುದೇನೆಂದರೆ ೯೨% ಕುಟುಂಬದಲ್ಲಿ ವರದಕ್ಷಿಣೆಯನ್ನು ತೆಗೆದುಕೊಂಡಿರುವುದಿಲ್ಲ ಮಾಹಿತಿದಾರರ ಪ್ರಕಾರ ವರದಕ್ಷಿಣೆ ತೆಗೆದುಕೊಳ್ಳುವವರ ಸಂಖ್ಯೆ ತುಂಬಾ ಕಡಿಮೆ ಆದರೆ ಇತ್ತೀಚಿನ ದಿನಗಳಲ್ಲಿ ಎಲ್ಲಾ ಸಮುದಾಯದಲ್ಲಿ ವರದಕ್ಷಿಣೆ ತೆಗೆದುಕೊಳ್ಳುವ ಹಾಗೆ ಇವರಲ್ಲಿ ಕೂಡ ೮% ವರದಕ್ಷಿಣೆ ತೆಗೆದುಕೊಳ್ಳುತ್ತಾರೆ ಎಂಬುದು ಮಾಹಿತಿದಾರರ ಅಭಿಪ್ರಾಯ.

**ಕೋಷ್ಟಕ ಸಂಖ್ಯೆ-೩.೧೪**

**ಸಾಮಾಜಿಕ ಸಮಾರಂಭಗಳಲ್ಲಿ ಮಹಿಳೆಯರ ಭಾಗವಹಿಸುವಿಕೆ**

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹೌದು | ೫ | ೫ |
| ೨ | ಇಲ್ಲ | ೯೫ | ೯೫ |
| ಒಟ್ಟು | | ೧೦೦ | ೧೦೦ |




ಈ ಕೋಷ್ಟಕದಲ್ಲಿ ನಾವು ನೋಡುವುದಾದರೆ ೫% ಕೊರಗ ಮಹಿಳೆಯರು ಸಾಮಾಜಿಕ ಸಮಾರಂಭಗಳಲ್ಲಿ ಪಾಲ್ಗೊಳ್ಳುತ್ತಾರೆ ಅದೇ ರೀತಿ ೯೫% ಕೊರಗ ಮಹಿಳೆಯರು ಸಾಮಾಜಿಕ ಸಭೆ ಸಮಾರಭಗಳಲ್ಲಿ ಪಾಲ್ಗೊಳ್ಳುವುದಿಲ್ಲ ಕಾರಣ ಸಮಾಜದಲ್ಲಿ ಅವರನ್ನು ಅಸ್ಪೃಶ್ಯರಂತೆ ಕಾಣುವುದರಿಂದ ಮತ್ತು ಸಮಾಜದಲ್ಲಿ ಅವರ ಸ್ಥಾನಮಾನ ಕೆಳಮಟ್ಟದಲ್ಲಿ ಇರುವುದರಿಂದ ಸಮಾರಂಭಗಳಲ್ಲಿ ಭಾಗವಹಿಸುವುದಿಲ್ಲ ಅಲ್ಲದೆ ಸಭೆ ಸಮಾರಂಭಗಳಿಗೆ ಇವರನ್ನು ಆಹ್ವಾನಿಸುವುದಿಲ್ಲ. ಕೊರಗ ಮಹಿಳೆಯರು ಅನಕ್ಷರಸ್ಥರಾಗಿರುವುದರಿಂದ ಇತರರೊಂದಿಗೆ ಬೆರೆಯಲು ಹಿಂಜರಿಯುತ್ತಾರೆ. ಅದೇ ರೀತಿ ಶಿಕ್ಷಣವನ್ನು ಪಡೆದ ಮಹಿಳೆಯರು ಸಾಮಾಜಿಕ ಸಮಾರಂಭಗಳಲ್ಲಿ ಪಾಲ್ಗೊಳ್ಳುವುದನ್ನು ಕಾಣಬಹುದು.

## ಕೋಷ್ಟಕ ಸಂಖ್ಯೆ-೩.೧೫

## ಕೊರಗ ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳು

| ಕ್ರ.ಸಂ | ಸಮಸ್ಯೆಗಳು | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಕೌಟುಂಬಿಕ ಸಮಸ್ಯೆ | ೨೫ | ೨೫ |
| ೨ | ಸಾಮಾಜಿಕ ಸಮಸ್ಯೆ | ೩೦ | ೩೦ |
| ೩ | ಆರ್ಥಿಕ ಸಮಸ್ಯೆ | ೪೫ | ೪೫ |
| ಒಟ್ಟು | | ೧೦೦ | ೧೦೦ |

ಈ ಮೇಲಿನ ಕೋಷ್ಟಕವು ವಿವರಿಸುವುದೇನೆಂದರೆ ೨೫% ಮಹಿಳೆಯರು ಕೌಟುಂಬಿಕ ಸಮಸ್ಯೆಯನ್ನು, ೩೦% ಸಾಮಾಜಿಕ ಸಮಸ್ಯೆಯನ್ನು, ೪೫% ಆರ್ಥಿಕ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಸಭೆ ಸಮಾರಂಭಗಳಿಗೆ ಆಹ್ವಾನವಿಲ್ಲ, ದೇವಾಸ್ಥಾನಗಳಿಗೆ ಪ್ರವೇಶವಿಲ್ಲ, ಇತರರು ಇವರನ್ನು ಅಸ್ಪೃಶ್ಯರು ಎಂದು ಕೀಳಾಗಿ ಕಾಣುವಂತದ್ದು. ಮುಂತಾದ ಸಮಾಜಿಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಗಂಡ ಹೆಂಡತಿ ಜಗಳ, ಕೌಟುಂಬಿಕ ಕಲಹ, ದೌರ್ಜನ್ಯ ಮುಂತಾದ ಕೌಟುಂಬಿಕ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ.ಇದರ ಜೊತೆಗೆ ಹೆಚ್ಚಿನ ಮಹಿಳೆಯರು ಬಡತನ, ನಿರುದ್ಯೋಗ. ಸ್ವಂತ ಮನೆ ಇಲ್ಲದಿರುವುದು ಮುಂತಾದ ಆರ್ಥಿಕ ಸಮಸ್ಯೆಯಿಂದ ಬಳಲುತ್ತಿದ್ದಾರೆ.

## ಆರ್ಥಿಕ ಸ್ಥಿತಿಗತಿ

ಘನತೆ ಗೌರವ ತರುವ ಜೀವನ ಮಟ್ಟದ ಕೊರತೆಯು ಇವರಲ್ಲಿ ಸದಾ ಕಂಡುಬರುತ್ತದೆ. ಅಸ್ಥಿತ್ವವೇ ಪ್ರದಾನ ಹೋರಾಟವಾಗಿದೆ. ಇನ್ನು ಕೂಡ ಸ್ವಂತ ಭೂಮಿಯಿಲ್ಲದ, ಮೂಲಭೂತ ಸೌಲಭ್ಯಗಳಾದ ಮನೆ, ಆಹಾರ, ಉಡುಪುಗಳ ಬಗ್ಗ ಸ್ಪಷ್ಟವಾದ ಕಲ್ಪನೆಯಿಲ್ಲ. ಬಡತನ, ಸ್ವಚ್ಚತಾಕೆಲಸ ಆಹಾರದ ಬಗ್ಗೆ ಅರಿಯದಿರುವಿಕೆ, ರೋಗಗಳು ಬಂದಾಗ ಆಸ್ಪತ್ರೆಗೆ ಹೋಗಬೇಕು ಎನ್ನುವ ಸಾಮಾನ್ಯ ಅರಿವಿನ ಕೊರತೆಯನ್ನು ಕಾಣಬಹುದಾಗಿದೆ. ಹೆಚ್ಚಿನ ಮನೆಗಳಲ್ಲಿ ಒಂದು ಅಥವಾ ಎರಡು ಕೋಣೆಗಳನ್ನು ಕಾಣಬಹುದು.ಗಾಳಿ ಬೆಳಕಾಡದ ಮನೆಗಳೇ ಹೆಚ್ಚು.ಅನಾರೋಗ್ಯ ಸಾಮಾನ್ಯ ಸಮಸ್ಯೆ, ಅಜ್ಞಾನ, ಅನಾಗರೀಕತೆ, ಅನಕ್ಷರತೆ ಇತ್ಯಾದಿ ಸಮಸ್ಯೆಗಳನ್ನು ಕಾಣಬಹುದು.

## ಉದ್ಯೋಗ:-

ಸಾಮಾನ್ಯವಾಗಿ ಕೊರಗರ ಉದ್ಯೋಗಗಳನ್ನು ವಿಶ್ಲೇಷಣೆ ಮಾಡುವುದಾದರೆ, ನಗರ, ಪಟ್ಟಣಗಳಿಗೆ ವಲಸೆ ಬಂದಂತಹ ಕೊರಗರು ನಗರ ಪ್ರದೇಶಗಳಲ್ಲಿಯ ರಸ್ತೆ, ಒಳಚರಂಡಿ ಶೌಚಲಯ ಮತ್ತಿತರ ಸಾರ್ವಜನಿಕ

ಸ್ಥಳಗಳನ್ನು ಶುಚಿಗೊಳಿಸುವುದು ಮತ್ತು ಅಲ್ಲಿದ್ದ ಕಸವನ್ನು ಎತ್ತಿ ಬೇರೊಂದು ಕಡೆಗೆ ಸಾಗಿಸುವ ಕೆಲಸಕಾರ್ಯಗಳಲ್ಲಿ ತೊಡಗಿರುವುದನ್ನು ಕಾಣಬಹುದು. ಮಹಿಳೆಯರು ಪೌರಕಾರ್ಮಿಕ ಕೆಲಸದ ಜೊತೆಗೆ ಇತರರ ಮನೆಗಳಲ್ಲಿ ಮನೆಗೆಲಸ ಮತ್ತು ಬೀಡಿ ಕಟ್ಟುವುದರಲ್ಲಿ ತೊಡಗಿಸಿಕೊಂಡಿದ್ದಾರೆ. ಹಳ್ಳಿ ಗುಡ್ಡಗಾಡು ಪ್ರದೇಶಗಳಲ್ಲಿ ವಾಸವಾಗಿರುವ ಕೊರಗರು  ಬೆತ್ತ, ಬಿದಿರು, ಬಿಳಲುಗಳಿಂದ  ಬುಟ್ಟಿ,ಬಿಳಲಿನಿಂದ ಕಲಾತ್ಮಕ ವಸ್ತುಗಳ ನೇಯ್ಗೆ, ತೊಟ್ಟಿಲು ತಯಾರಿಸುವುದು, ಮಲ್ಲಿಗೆ ಕೃಷಿ, ಜೇನು ಸಂಗ್ರಹಿಸುವುದು, ಹಗ್ಗ ಮಾಡುವುದು, ಅಸ್ಪತ್ರೆಗಳಲ್ಲಿ ಕೆಲಸ ಮಾಡುವುದು. ಕೂಲಿ, ಬೀಡಿ ಕಟ್ಟುವ ಕೆಲಸದ ಜೊತೆಗೆ ತಮ್ಮ ಮೂಲಕಸುಬು ಆದ ಬುಟ್ಟಿ, ಚಾಪೆ,ನೇಯ್ಗೆ ಮತ್ತಿತರ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದಾರೆ.

ಬಡತನ ,ಅವಮಾನ, ಅಸ್ಪೃಶ್ಯತೆ, ಗುಲಾಮಗಿರಿತನ ಎಂಬ ಹತ್ತು ಹಲವು ಪ್ರಬಾವಿ ಸುಳಿಯನ್ನು ಭೇದಿಸಿ ಅಲ್ಲೊಬ್ಬ ಇಲ್ಲೊಬ್ಬ ವಕೀಲ, ಇಂಜಿನಿಯರ್, ಟೀಚರ್, ಕ್ಲರ್ಕ್, ಮತ್ತಿತರ ಕೆಲಸಗಳನ್ನು ಪಡೆದುಕೊಂಡು ಮುಕ್ತ ಅವಕಾಶ ಸಿಕ್ಕಿದರೆ ಇತರ ಜಾತಿ, ಧರ್ಮದವರಿಗಿಂತ ನಾವೇನು ಕಡಿಮೆ ಇಲ್ಲ ಎಂಬುದನ್ನು ಸಾಬೀತುಪಡಿಸಿದವರು ಇದ್ದಾರೆ. ಕೆಲವರು ಸರ್ಕಾರದ ಸವಲತ್ತುಗಳನ್ನು ಉಪಯೋಗಿಸಿಕೊಂಡು ಆಟೋರಿಕಾ, ಗೂಡಂಗಡಿ ಮತ್ತಿತ್ತರ ಸ್ವ ಉದ್ಯೋಗಗಳನ್ನು ಪ್ರಾರಂಬಿಸಿರುವುದನ್ನು ಕಾಣಬಹುದು.

**ಕೊರಗರ ಆರೋಗ್ಯ**

ಒಬ್ಬ ಮಾನವನ ಜೀವಿತಾವಧಿಯನ್ನು ನಿರ್ಧರಿಸುವುದು ಹಾಗು ಅವರ ಸರ್ವತೋಮುಖ ಅಭಿವೃದ್ಧಿ ಕಾರಣವಾಗಿರುವುದು  ಅವರ ಆರೋಗ್ಯದ ಮೂಲಕ. ಇಲ್ಲಿ ಮಾನವನು ದೈಹಿಕವಾಗಿ, ಮಾನಸಿಕವಾಗಿ ಆರೋಗ್ಯವಂತನಾಗಿದ್ದಾಗ ಮಾತ್ರ ಅವನು ಸಾಮಾಜಿಕವಾಗಿ ಆರ್ಥಿಕವಾಗಿ ಅಭಿವೃದ್ಧಿ ಹೊಂದಲು ಸಾದ್ಯ. ಆದರೆ ಇಂದು ಕೊರಗ ಸಮುದಾಯವನ್ನು ಕಾಡುವ ರಕ್ತಹೀನತೆ, ಅಪೌಕತೆ, ಸಾಂಕ್ರಮಿಕ ರೋಗಗಳಾದ ಟಿ.ಬಿ, ಕ್ಯಾನ್ಸರ್, ಎಚ್.ಐ.ವಿ, ಕುಷ್ಟರೋಗ,  ಎಂಬ ಮಾರಕ ಕಾಯಿಲೆಗಳು ಅವರ ಆರೋಗ್ಯವು ಹದೆಗೆಡಲು ಕಾರಣವಾಗಿದೆ.

ಹಿಂದೆ ಕಾಡಿನ ಮದ್ಯೆ ಪ್ರಕೃತಿಯ ಮಡಿಲಲ್ಲಿ ನದಿ ತೊರೆ ಹರಿಯುವ ಪ್ರಶಾಂತ ವಾತಾವರಣದಲ್ಲಿ ವಾಸಿಸುತ್ತಿದ್ದವು. ಕಾಡಿನ ಗಡ್ಡೆ ಗೆಣಸುಗಳು, ಹಣ್ಣುಗಳನ್ನು ಕಾಡಿನ ಪ್ರಾಣಿಗಳ ಮಾಂಸವನ್ನು ಆಹಾರವಾಗಿ ಉಪಯೋಗಿಸುತ್ತಿದ್ದವು. ಅಲ್ಲದೆ ಅವರು ಆರೋಗ್ಯಕ್ಕೆ ಗಿಡಮೂಲಿಕೆಗಳನ್ನು ಬಳಸುತ್ತಿದ್ದರು. ಸರ್ಕಾರದ ಈಗಿರುವ ಆರೋಗ್ಯದ ಯೋಜನೆಗಳಲ್ಲಿ ಸಾರ್ವಜನಿಕ ಆಸ್ಪತ್ರೆಗಳು, ಕಾರ್ಯಕರ್ತರು ಇದ್ದರೂ ಕೂಡ ಸಮುದಾಯಕ್ಕೆ ಸರಿಯಾದ ಮಾಹಿತಿ  ಸಿಗುವುದಿಲ್ಲ ಕಾರ್ಯಕರ್ತರ ಭೇಟಿ ತುಂಬಾ ಕಡಿಮೆ. ಪಾರಂಪರಿಕ ಗಿಡಮೂಲಿಕೆಗಳನ್ನು ಅವಲಂಬಿಸಿದ್ದ ಎವರು ಈಗಿರುವ ಯವುದೇ ಔಶದೋಪಚರಗಳನ್ನು ಒಪ್ಪಿಕೊಳ್ಳೂವುದು ಅ  ಸುಲಭವಲ್ಲ. ಇದರಿಂದಾಗಿ ಸರ್ಕಾರದ ಕೆಲವು ಯೋಜನೆಗಳು ಸಂಪೂರ್ಣ ವಿಫಲತೆಯನ್ನು ಕಂಡಿರುವುದನ್ನು ಕಾಣಬಹುದು.

**ಕೋಷ್ಟಕ ಸಂಖ್ಯೆ-೩.೧೬**

**ಸದಸ್ಯರಲ್ಲಿ ಯಾರಾದರೂ ಇಂದಿಗೂ ಪಾರಂಪರಿಕ ಉದ್ಯೋಗವನ್ನು ಅನುಸರಿಸುತ್ತಿದ್ದೀರಾ!**

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹೌದು | ೨೦ | ೨೦ |
| ೨ | ಇಲ್ಲ | ೮೦ | ೮೦ |
| ಒಟ್ಟು | | ೧೦೦ | ೧೦೦ |

ಈ ಮೇಲಿನ ಕೊಷ್ಟಕದಲ್ಲಿ ತಿಳಿಸುವುದನೇಂದರೆ ೮೦% ಜನರು ಇಂದಿಗೂ ಪಾರಂಪರಿಕ ಉದ್ಯೋಗವನ್ನು ಮಾಡುತ್ತಿಲ್ಲ ೨೦% ಜನರು ಮಾತ್ರ ಇಂದಿಗೂ ಪಾರಂಪರಿಕ ಉದ್ಯೋಗವನ್ನು ಮಾಡುತ್ತಾರೆ. ಆದರಿಂದ ಈ ಅದ್ಯಯನವು ತಿಳಿಸುವುದನೇಂದರೆ ಹೆಚ್ಚಿನವರು ಯಾರು ಪಾರಂಪರಿಕ ಉದ್ಯೋಗವನ್ನು ಮಾಡುತ್ತಿಲ್ಲ ಕಾರಣ ಬುಟ್ಟಿನೇಯುವುದು, ಚಾಪೆ ಹಣೆಯುವುದು ಮುಂತಾದ ಉದ್ಯೋಗವು ಲಾಭದಾಯಕವಾಗಿಲ್ಲದ ಮತ್ತು ಅವರು ತಯಾರಿಸಿದ ವಸ್ತುಗಳಿಗೆ ಸರಿಯಾದ ಬೆಲೆ ಸಿಗದ ಕಾರಣ ಈ ಉದ್ಯೋಗವನ್ನು ಹೆಚ್ಚಿನವರು ಮಡುತ್ತಿಲ್ಲ. ಹಾಗು ಇವರು ಬೇರೆ ಉದ್ಯೋಗಗಳಾದ ಆಸ್ಪತ್ರೆ ಮುನ್ಸಿಪಾಲಿಟಿಗಳಲ್ಲಿ ಸ್ವಚ್ಚತಾ ಕಾರ್ಯಗಳಲ್ಲಿ, ಕೂಲಿಕೆಲಸ ಗಳಲ್ಲಿ ತೊಡಗಿಕೊಂಡಿದ್ದಾರೆ. ಅದೇ ರೀತಿ ಕೆಲವರು ಇನ್ನು ಕೂಡ ಪಾರಂಪರಿಕ ಉದ್ಯೋಗವನ್ನು ಅನುಸರಿಸುತ್ತಿಲ್ಲ.

## ಕೋಷ್ಟಕ ಸಂಖ್ಯೆ-೩.೧೭

## ಕೊರಗ ಮಹಿಳೆಯರ ಉದ್ಯೋಗ

| ಕ್ರ.ಸಂ | ಉದ್ಯೋಗ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಸರ್ಕಾರಿ ಉದ್ಯೋಗ | ೩ | ೩ |
| ೨ | ಕೃಷಿ | ೦ | ೦ |
| ೩ | ಕೂಲಿ | ೪೪ | ೪೪ |
| ೪ | ಬುಟ್ಟಿ ನೇಯುವುದು | ೧೪ | ೧೪ |
| ೫ | ಇತರ | ೨೯ | ೩೯ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕವು ವಿವರಿಸುವುದೇನೆಂದರೆ ಕೇವಲ ೩% ಮಾತ್ರ ಸರ್ಕಾರಿ ಉದ್ಯೋಗದಲ್ಲಿದ್ದಾರೆ. ಹಾಗೆಯೇ ಕೃಷಿಯನ್ನು ಯಾರು ಕೂಡ ಮಾಡುತ್ತಿಲ್ಲ.ಅದರಲ್ಲೂ ಕೂಡ ೪೪% ಕೂಲಿ ಕೆಲಸವನ್ನು ಮಾಡುತ್ತಾರೆ. ೧೪% ಬುಟ್ಟಿನೇಯುವ ಕೆಲಸದಲ್ಲಿ ತೊಡಗಿದ್ದಾರೆ.ಮತ್ತು ೨೯% ಮಹಿಳೆಯರು ಇತರ ಕೆಲಸದಲ್ಲಿ ತೊಡಗಿದ್ದಾರೆ. ಈ ಮೇಲಿನ ಅದ್ಯಯನವು ತಿಳಿಸುವುದೇನೆಂದರೆ ೪೪% ಮಹಿಳೆಯರು ಕೂಲಿ ಕೆಲಸದಲ್ಲಿ ತೊಡಗಿದ್ದಾರೆ ಕಾರಣ ಅವರು ತುಂಬಾ ಬಡತನದಲ್ಲಿರುವುದರಿಂದ ಕೆಲಸ ಮಾಡುವುದು ತುಂಬಾ ಅನಿವಾರ್ಯವಾಗಿದೆ. ಅವರು ಅನಕ್ಷರಸ್ಥರಾಗಿರುವುದರಿಂದ ಉನ್ನತ ಉದ್ಯೋಗದಲ್ಲಿರುವರ ಸಂಖ್ಯೆ ತುಂಬಾ ವಿರಳ ಅದರಿಂದ ಹೆಚ್ಚಿನವರು ಕೂಲಿ, ಬುಟ್ಟಿ ನೇಯುವುದು ಹಾಗೂ ಸ್ವಚ್ಚತಾಕಾರ್ಯಗಳಲ್ಲಿ ತೊಡಗಿರುವವರ ಸಂಖ್ಯೆ ತುಂಬಾ ಹೆಚ್ಚು. ಇದರಿಂದ ಅವರ ಜೀವನ ಮಟ್ಟ ಅಷ್ಟೇನೂ ಸುಧಾರಿಸಿಲ್ಲ ಎಂದು ಹೇಳಬಹುದು.

### ಕೋಷ್ಟಕ ಸಂಖ್ಯೆ-೩.೧೮

### ಆದಾಯದ ಉಳಿತಾಯ

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹೌದು | ೪೦ | ೪೦ |
| ೨ | ಇಲ್ಲ | ೬೦ | ೬೦ |
| ಒಟ್ಟು | | ೧೦೦ | ೧೦೦ |




ಈ ಅಧ್ಯಯನದ ಪ್ರಕಾರ ಶೇಕಡಾ ೪೦% ರಷ್ಟು ಕೊರಗ ಮಹಿಳೆಯರು ಬ್ಯಾಂಕ್, ಸ್ವ-ಸಹಾಯ ಸಂಘಗಳಲ್ಲಿ ತಮ್ಮ ಆದಾಯದ ಸ್ವಲ್ಪ ಭಾಗವನ್ನು ಉಳಿತಾಯ ಮಾಡುತ್ತಾರೆ. ೬೦% ರಷ್ಟು ಮಹಿಳೆಯರು ತಮ್ಮ ಆದಾಯದಲ್ಲಿ ಉಳಿತಾಯ ಮಾಡುವುದಿಲ್ಲ. ಏಕೆಂದರೆ ಮಕ್ಕಳ ವಿದ್ಯಾಭ್ಯಾಸ, ಮನೆಯ ಖರ್ಚು ಹಾಗೂ ಇನ್ನಿತರ ಕಾರಣಗಳಿಂದಾಗಿ ಉಳಿತಾಯವನ್ನು ಮಾಡುವುದಿಲ್ಲ. ಅಲ್ಲದೆ ಮಹಿಳೆಯರು ಹೆಚ್ಚಾಗಿ ದುಡಿಮೆಗೆ ಹೋಗುವುದಿಲ್ಲ. ಗಂಡಸರು ದುಡಿಯುತ್ತಾರೆ. ಆದರೆ ಅವರಿಗಿರುವ ಕೆಲವು ದುಶ್ಚಟಗಳಿಂದಾಗಿ ಆದಾಯದಲ್ಲಿ ಉಳಿತಾಯ ಮಾಡುವ ಅರಿವು ಅವರಿಗಿಲ್ಲ.

**ಕೋಷ್ಟಕ ಸಂಖ್ಯೆ-೩.೧೯**

**ಸ್ವ-ಉದ್ಯೋಗ**

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹೌದು | ೦ | ೦ |
| ೨ | ಇಲ್ಲ | ೧೦೦ | ೧೦೦ |
| ಒಟ್ಟು | | ೧೦೦ | ೧೦೦ |




ಈ ಕೊಷ್ಟಕವು ತಿಳಿಸುವುದೇನೆಂದರೆ ೧೦೦% ಕೊರಗ ಸಮುದಾಯದ ಮಹಿಳೆಯರು ಯಾವುದೇ ರೀತಿಯ ಸ್ವ ಉದ್ಯೋಗವನ್ನು ಮಾಡುತ್ತಿಲ್ಲ. ಕಾರಣ ಅನಕ್ಷರತೆ, ಹಣದ ಕೊರತೆ, ನಾಯಕತ್ವದ ಕೊರತೆ, ಬ್ಯಾಂಕುಗಳಲ್ಲಿ ವ್ಯವಹಾರ ಮಾಡಲು ಗೊತ್ತಿಲ್ಲದೆ ಇರುವುದು. ಸ್ವ ಉದ್ಯೋಗ ಮಾಡಲು ಇವೆಲ್ಲವುಗಳ ಅರಿವು ಇಲ್ಲದೆ ಇರುವುದರಿಂದ ಸ್ವಂತ ಉದ್ಯೋಗ ಮಾಡಲು ಹಿಂಜರಿಯುತ್ತಾರೆ.

### ಕೋಷ್ಟಕ ಸಂಖ್ಯೆ-೩.೨೦

### ಸ್ವ-ಸಹಾಯ ಸಂಘಗಳ ಸದಸ್ಯತ್ವ

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹೌದು | ೧೫ | ೧೫ |
| ೨ | ಇಲ್ಲ | ೮೫ | ೮೫ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕದಿಂದ ಕಂಡುಕೊಂಡ ಅಂಶವೇನೆಂದರೆ ೧೫% ಕೊರಗ ಮಹಿಳೆಯರು ಸ್ವ-ಸಹಾಯ ಸಂಘಗಳಲ್ಲಿ ಸದಸ್ಯತ್ವವನ್ನು ಪಡೆದುಕೊಂಡಿದ್ದಾರೆ. ೮೫%ರಷ್ಟು ಮಹಿಳೆಯರು ಸದಸ್ಯತ್ವವನ್ನು ಹೊಂದಿಲ್ಲ. ಇದಕ್ಕೆ ಮುಖ್ಯ ಕಾರಣ ಕೀಳರಿಮೆ, ಸಂಘದ ಇತರ ಮಹಿಳೆಯರೊಂದಿಗೆ ಹೊಂದಿಕೊಳ್ಳಲು ಕಷ್ಟವಾಗಿದ್ದು ಹಾಗೂ  ಪ್ರೋತ್ಸಾಹಕದ ಕೊರತೆಯಿಂದಾಗಿ ಸಂಘದ ಸದಸ್ಯತ್ವವನ್ನು ಪಡೆಯುತ್ತಿಲ್ಲ. ಅಲ್ಲದೆ ಹೆಚ್ಚಿನವರು ಅನಕ್ಷರಸ್ಥರಾಗಿದ್ದು, ನಾಯಕತ್ವದ ಕೊರತೆಯಿಂದಾಗಿ ಯಾರೂ ಕೂಡಾ ಸ್ವ-ಸಹಾಯ ಸಂಘಗಳಲ್ಲಿ ಭಾಗವಹಿಸುತ್ತಿಲ್ಲ ಎಂದು ಹೇಳಬಹುದು. ಆದರೂ ಕೂಡಾ ಕೆಲವರು ಸಂಘಗಳಲ್ಲಿ ಸದಸ್ಯತ್ವ ಇದ್ದು, ಸಾಲವನ್ನು ತೆಗೆದುಕೊಂಡು ಸ್ವಂತ ಮನೆಗಳನ್ನು ಕಟ್ಟಿಕೊಂಡಿದ್ದಾರೆ.

## ಕೋಷ್ಟಕ ಸಂಖ್ಯೆ-೩.೨೧

## ಸಾಲದ ಪ್ರಯೋಜನ

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹೌದು | ೪೦ | ೪೦ |
| ೨ | ಇಲ್ಲ | ೬೦ | ೬೦ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಅಧ್ಯಯನದಿಂದ ತಿಳಿಯುವುದೇನೆಂದರೆ ೪೦% ಕೊರಗ ಮಹಿಳೆಯರು ಮಾತ್ರ ಸಾಲವನ್ನು ಪಡೆಯುತ್ತಾರೆ. ಆದರೆ ೬೦% ಕೊರಗ ಮಹಿಳೆಯರು ಸಾಲವನ್ನು ಪಡೆದಿರುವುದಿಲ್ಲ. ಸಾಲವನ್ನು ಪಡೆಯದಿರಲು ಮುಖ್ಯ ಕಾರಣವೇನೆಂದರೆ ಕೊರಗ ಮಹಿಳೆಯರು ಅನಕ್ಷರಸ್ಥರಾಗಿರುವುದರಿಂದ ಹಾಗೂ ಬಡತನದಲ್ಲಿರುವುದರಿಂದ ತಮ್ಮ ಆದಾಯದಲ್ಲಿ ಉಳಿತಾಯ ಮಾಡಲು ಅಸಮರ್ಥರಾಗಿರುತ್ತಾರೆ. ಅಲ್ಲದೆ ಸಾಲವನ್ನು ತೆಗದರೂ ಅದನ್ನು ಹಿಂತಿರುಗಿಸಲು ಅಶಕ್ತರಾಗಿರುತ್ತಾರೆ. ಹಾಗಾಗಿ ಅವರು ಸಾಲವನ್ನು ಪಡೆಯಲು ಹಿಂಜರಿಯುತ್ತಾರೆ.

ಆದರೆ ೪೦% ಮಹಿಳೆಯರು ಸಾಲವನ್ನು ಅವರ ಮನೆಯವರ ಮುಂದಾಳತ್ವದಲ್ಲಿಪಡೆದಿರುತ್ತಾರೆ. ಏಕೆಂದರೆ ಇವರು ಮನೆ ಕಟ್ಟಲು, ಮಗಳ ಮದುವೆಗಾಗಿ ಬ್ಯಾಂಕ್, ಸ್ವ-ಸಹಾಯ ಸಂಘಗಳಲ್ಲಿ ಅಥವಾ ಅವರು ಕೆಲಸ ಮಾಡುವ ಸ್ಥಳಗಳಲ್ಲಿ ಸಾಲವನ್ನು ಪಡೆಯುತ್ತಾರೆ.

### ಕೋಷ್ಟಕ ಸಂಖ್ಯೆ-೩.೨೨

### ಅನಾರೋಗ್ಯವಾದಲ್ಲಿ ಯಾವುದಕ್ಕೆ ಅವಲಂಬಿತರಾಗುತ್ತಿರಾ

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಆಸ್ಪತ್ರೆ | ೨೦ | ೨೦ |
| ೨ | ಮನೆಮದ್ದು | ೩೦ | ೩೦ |
| ೩ | ಪ್ರಾಥಮಿಕ ಆರೋಗ್ಯ ಕೇಂದ್ರ | ೫೦ | ೫೦ |
| ಒಟ್ಟು | | ೧೦೦ | ೧೦೦ |

ಈ ಮೇಲಿನ ಕೋಷ್ಟಕವು ತೋರಿಸುವುದೇನೆಂದರೆ ೨೦% ಕೊರಗ ಮಹಿಳೆಯರು ಅನಾರೋಗ್ಯವಾದಗ ಆಸ್ಪತ್ರೆಯನ್ನು ಅವಲಂಬಿಸುತ್ತಾರೆ. ೩೦% ಮಹಿಳೆಯರು ಮನೆಮದ್ದನ್ನು, ೫೦% ಕೊರಗಮಹಿಳೆಯರು ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ಅವಲಂಬಿಸಿದ್ದಾರೆ. ಹೆಚ್ಚಿನ ಮಹಿಳೆಯರು ಆಸ್ಪತ್ರೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವುದರಿಂದ ಅವರಿಗೆ ಏನಾದರೂ ಅನಾರೋಗ್ಯವಾದಾಗ ಅವರು ಕೆಲಸ ಮಾಡುತ್ತಿರುವ ಅಸ್ಪತ್ರೆಗಳಲ್ಲಿಯೇ ಚಿಕಿತ್ಸೆಯನ್ನು ಪಡೆಯುತ್ತಾರೆ. ಕೆಲವು ಕೊರಗ ಸಮುದಾಯದವರು ಕಾಡಿನಲ್ಲಿ ವಾಸಿಸುವುದರಿಂದ ತುರ್ತುಚಿಕಿತ್ಸೆಗಾಗಿ ಮನೆಮದ್ದನ್ನು ಅವಲಂಬಿಸಿದ್ದಾರೆ. ಹಾಗೆಯೇ ಅವರ ಕುಟುಂಬದಲ್ಲಿ ಬಡತನವಿರುವುದರಿಂದ ಅಸ್ಪತ್ರೆಗಳಲ್ಲಿ ದುಬಾರಿ ಹಣ ಕೊಟ್ಟು ಮದ್ದನ್ನು ಪದೆಯಲು ಅಶಕ್ತರಾಗಿದ್ದಾರೆ. ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ಔಷಧಗಳು ಉಚಿತವಾಗಿ ಸಿಗುವುದರಿಂದ ಹೆಚ್ಚಿನವರು ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ಅವಲಬಿಸಿದ್ದಾರೆ.

## ರಾಜಕೀಯ ಪರಿಚಯ

ಕೊರಗ ಮಹಿಳೆಯರಿಗೆ ರಾಜಕೀಯ ಸಶಕ್ತೀಕರಣ, ಸಬಲೀಕರಣ ಗ್ರಹಿಕೆಗೆ ಬಾರದ ಪದಗಳಾಗಿರುವುದರಿಂದ ಅಚ್ಚರಿ ಇಲ್ಲ. ಸಂವಿಧಾನವು ಎಷ್ಟೇ ಸ್ಥಾನಮಾನ ನೀಡಿದರೂ, ಸೌಲಭ್ಯಗಳನ್ನು ಕಲ್ಪಿಸಿದರೂ ಇವುಗಳ ಉಪಯೋಗ ಪಡೆಯುವ ಧಾರಣ ಶಕ್ತಿಯು ಕೊರಗ ಸಮುದಾಯದ ಮಹಿಳೆಯರಿಗಿಲ್ಲ. ಮುಖ್ಯವಾಗಿ ಕೊರಗ ಸಮುದಾಯಗಳ ಮಹಿಳೆಯರಿಗೆ ಆರ್ಥಿಕ ಸ್ಥಿರತೆ ಬೇಕಾಗಿದೆ. ರಾಜಕೀಯ ಭಾಗವಹಿಸುವಿಕೆಯನ್ನು ಅರ್ಥ ಮಾಡಿಕೊಳ್ಳಲು ಶಿಕ್ಷಣ ಅಗತ್ಯವಾಗಿದೆ. ಸರ್ಕಾರ ಒದಗಿಸುವ ಸವಲತ್ತುಗಳು, ಸಂವಿಧಾನಿಕ ಸೌಲಭ್ಯಗಳನ್ನು ಬುಡಕಟ್ಟು ಮಹಿಳೆಯರು ಮೈಗೂಡಿಸಿಕೊಳ್ಳುವ ಸಾಮರ್ಥ್ಯ ಹೊಂದಬೇಕಾಗಿದೆ.

ಕೊರಗ ಮಹಿಳೆಯರಿಗೆ ರಾಜಕೀಯ ತರಭೇತಿಯು ದೊರೆಯಬೇಕು. ಇದರಿಂದ ಅವರಲ್ಲಿ ರಾಜಕೀಯ ಪ್ರಜ್ಞೆಯು ಬೆಳೆಯಲು ಸಾಧ್ಯವಾಗಬಹುದು. ಪ್ರಜಾಪ್ರಭುತ್ವದ ತಿಳುವಳಿಕೆ, ರಾಜಕೀಯವಾಗಿ ಭಾಗವಹಿಸುವುದು, ನಿರ್ಧಾರಗಳನ್ನು ಕೈಗೊಳ್ಳುವಿಕೆಯಲ್ಲಿ ಪಾತ್ರ ವಹಿಸುವುದು, ಮತ ಚಲಾಯಿಸುವುದರ ಪ್ರಾಮುಖ್ಯತೆಗಳನ್ನು ಗ್ರಹಿಸುವುದರ ಮೂಲಕ ರಾಜಕೀಯವಾಗಿ ಮಹಿಳೆಯರು ಸಶಕ್ತರಾಗಲು ಪ್ರಯತ್ನಿಸಬಹುದಾಗಿದೆ.

ಭಾರತೀಯ ನಾಗರಿಕ ಮಹಿಳೆಯ ಪರಿಸ್ಥಿತಿ ನಾನಾ ವಿಧದ ಶಿಕ್ಷಣ ಸೌಲಭ್ಯಗಳಿಂದಾಗಿ ದಿನೇ ದಿನೇ ಉತ್ತಮಗೊಳ್ಳುತ್ತಿದೆ. ಮಹಿಳಾ ಮಂಡಳಿಗಳಲ್ಲಿ, ಸಾರ್ವಜನಿಕ ಕ್ಷೇತ್ರಗಳಲ್ಲಿ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಆಕೆ ಭಾಗವಹಿಸುತ್ತಿದ್ದಾಳೆ. ಆದರೆ ಉದ್ಯೋಗಸ್ಥ ಮಹಿಳೆಯರ ಸಮಸ್ಯೆಗಳು ಜೀವನದ ಸುಖ-ಶಾಂತಿಗಳಿಗೆ ಅಡ್ಡಿಯಾಗುತ್ತಿರುವಂತೆಯೇ ತೋರುತ್ತಿದೆ. ಮಹಿಳೆಯರ ಸಮಸ್ಯೆಗಳಿಗಿಂತ ಗ್ರಾಮೀಣ ಮಹಿಳೆಯು ಮುಖ್ಯವಾಗಿ ಅಜ್ಞಾನ ದಾರಿದ್ರ್ಯಗಳಿಂದ ನರಳುತ್ತಿರುವ ಮಹಿಳೆಯ ಸಮಸ್ಯೆಗಳು ತೀರಾ ಭಿನ್ನವಾಗಿದೆ. ಕರುಣಾಜನಕವಾಗಿದೆ ಎಂಬುದನ್ನು ಮಹಿಳಾ ವಾದಿಗಳು ಅರಿಯಬೇಕಾಗಿದೆ.

ವಿವಿಧ ಚಳುವಳಿಗಳಲ್ಲಿ ಮತ್ತು ರಾಜಕೀಯ ಪಕ್ಷಗಳಲ್ಲಿ ಸಂಘಟಿತರಾಗಿ ಹೋರಾಟ ನಿರತರಾದ ಮಹಿಳೆಯರಿಗೆ ದಕ್ಕುವ ರಾಜಕೀಯ ಅನುಭವ ವಿಫಲವಾಗಿರುತ್ತದೆ. ಆದರೆ ಆ ಚೌಕಟ್ಟುಗಳೊಳಗೆ ನಿರ್ಣಯಾಧಿಕಾರವೆಲ್ಲ ಕೇಂದ್ರಿತವಾಗಿರುವುದು ನಾಯಕರಾದ ಪುರಷರ ಕೈಯಲ್ಲಿ. ಅವರೂ ರೂಪಿಸುವ ತತ್ವ ಪ್ರಣಾಲಿ, ಹಾಗೂ ಕ್ರಿಯಾತಂತ್ರಗಳಿಗೆ ನಿಷ್ಠರಾಗಿವುದೇ ಮಹಿಳೆಯ ತತ್ವನಿಷ್ಠೆ ಪಕ್ಷನಿಷ್ಠೆಗಳೆನಿಸಿಕೊಳ್ಳುತ್ತದೆ. ತಮ್ಮದೇ ಸಂಘಟನೆಯ ಒಳಗೂ ರೂಢಿಯಾಗಿರುವ ಪಿತೃ ಪ್ರಧಾನ ಧೋರಣೆಗಳನ್ನು, ಜನತಂತ್ರ ವಿರೋಧಿಯಾದ ಕಾರ್ಯ ವೈಖರಿಗಳನ್ನು, ಅರ್ಥಾತ್ ಸಂಘಟನೆಯದೇ ಒಳ ವಿರೋಧಗಳನ್ನು ಮಹಿಳೆಯರ ಅನುಭವವೆಂದು ಅವರು ಅಭಿಯಕ್ತಿಸಲು ಹೊರಟರೆ ಅವರನ್ನು ನಿರುತ್ಸಾಹಗೊಳಿಸುವ, ತಿದ್ದುವ, ದಂಡಿಸುವ ನೀತಿಗಳನ್ನು ಚಳುವಳಿ ರಾಜಕೀಯ ಪಕ್ಷಗಳು ಅನುಸರಿಸಬಹುದು. ರಾಜಕೀಯ ಕಾರ್ಯಕರ್ತರಾಗಿ ತಾವು ಗಳಿಸಿದ ಅನುಭವ ಎಷ್ಟೇ ವಿಸ್ತಾರವಾಗಿದ್ದರೂ ಸತ್ಯ ಶೋಧನೆಯ ನೆಲೆಯಿಂದ ಮಹಿಳೆಯರು ಅದನ್ನು ಅಭಿವ್ಯಕ್ತಿಸಿರುವುದು ತೀರಾ ವಿರಳ.

ರಾಜಕೀಯದಂತಹ ಕೇಂದ್ರೀಕೃತ ವ್ಯವಸ್ಥೆಯೊಳಗಿನ ಮಹಿಳಾ ಅನುಭವಗಳನ್ನು ಹೇಳುವ ಹಕ್ಕು ನ್ಯಾಯಯುತವೇ. ಆದರೆ ಅದೇ ರಾಜಕೀಯದ ಪಕ್ಷ ಹಿತಾಸಕ್ತಿಯ ಎದುರಲ್ಲಿ ಈ ಸತ್ಯ ಶೋಧನೆ ಮಣಿಯಲೇ ಬೇಕಾಗುತ್ತದೆ. ನ್ಯಾಯ ಅನ್ಯಾಯಗಳ ಚರ್ಚೆಯನ್ನು ಕುರಿತು ರಾಜಕೀಯದಲ್ಲಿರುವ ಮಹಿಳೆಯರು ಮೌನ

ವಹಿಸುವುದು ಹೀಗೆ ಪಕ್ಷದ ಹಿತಾಸಕ್ತಿಯಿಂದಲೇ ಅಲ್ಲದೇ ಯಾವುದೇ ರಾಜಕೀಯ ಹೋರಾಟ ಯಾವಾಗಲೂ ಹೊರಗಿನ ಶತ್ರುವನ್ನು ಲಕ್ಷ್ಯವಾಗಿಟ್ಟುಕೊಂಡಿರುತ್ತದೆ. ವಿಭಿನ್ನ ಪಕ್ಷಗಳ, ಸರ್ಕಾರಗಳ, ಆರ್ಥಿಕ ರಾಜಕೀಯ ನೀತಿಗಳು ವಿದೇಶಿ ಶಕ್ತಿಗಳ ವಿರುದ್ಧವಾಗಿ ಹೋರಾಡಿ ಆ ಬಗ್ಗೆ ಬರೆಯುವುದು ಹೋರಾಟದ ಋಣವೆಂದೇ ಸ್ವೀಕೃತವಾಗಿರುತ್ತದೆ. ಆ ಬರಹ ತುಂಬಾ ಪ್ರಗತಿ ಪರವೆಂದು ಮಾನ್ಯತೆಯನ್ನು ಪಡೆಯುತ್ತದೆ.

ರಾಜ್ಯದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶನದಲ್ಲಿ ಅಂಗನವಾಡಿ ಕಾರ್ಯಕರ್ತೆಯರ ಮೂಲಕ ಸರ್ಕಾರದಿಂದ ನೇರವಾಗಿ ಸ್ವ-ಸಹಾಯ ಸಂಘಗಳು ರೂಪುಗೊಂಡು ಕಾರ್ಯಾರಂಭ ಮಾಡುತ್ತಿವೆ. ಇದಕ್ಕೆ ಸಮಾನಾಂತರವಾಗಿ ಸ್ವಯಂ ಸೇವಾ ಸಂಸ್ಥೆಗಳು ತಮ್ಮ ಸಾಮಾಜಿಕ ಸೇವಾ ಕಾರ್ಯಕರ್ತರ ಮೂಲಕ ಸರ್ಕಾರದ ಆಶಯಕ್ಕನುಗುಣವಾಗಿ ಸ್ವ-ಸಹಾಯ ಗುಂಪುಗಳನ್ನು ರಚಿಸಿ ಮಾರ್ಗದರ್ಶನ ಮಾಡುತ್ತಿದೆ.

## ಕೋಷ್ಟಕ ಸಂಖ್ಯೆ-೪.೧

### ಸ್ಥಳೀಯ ಆಡಳಿತದಲ್ಲಿ ಭಾಗವಹಿಸುವಿಕೆ

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹೌದು | ೩ | ೩ |
| ೨ | ಇಲ್ಲ | ೯೭ | ೯೭ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕವನ್ನು ನೋಡಿದಾಗ ಕೇವಲ ೩% ಕೊರಗ ಮಹಿಳೆಯರು ಮಾತ್ರ ಸ್ಥಳೀಯ ಆಡಳಿತದಲ್ಲಿ ಭಾಗವಹಿಸಿದ್ದಾರೆ. ಉಳಿದ ೯೭% ಕೊರಗ ಮಹಿಳೆಯರು ಸ್ಥಳೀಯ ಆಡಳಿತದಲ್ಲಿ ಭಾಗವಹಿಸಿಲ್ಲ. ಈ ಅಧ್ಯಯನವು ಹೇಳುವುದೇನೆಂದರೆ ೩% ಕೊರಗ ಮಹಿಳೆಯರು ಮಾತ್ರ ಗ್ರಾಮ ಪಂಚಾಯತ್‌ನಲ್ಲಿ ಭಾಗವಹಿಸಿ ಪಂಚಾಯತ್‌ನ ಸದಸ್ಯರಾಗಿದ್ದಾರೆ. ಆದರೆ ನಗರ ಸಭೆ ಮತ್ತು ತಾಲೂಕು ಪಂಚಾಯತ್ ಗಳಲ್ಲಿ ಕೊರಗ ಮಹಿಳೆಯರು ಯಾರು ಭಾಗವಹಿಸಿಲ್ಲ. ಹೆಚ್ಚಿನ ಮಹಿಳೆಯರು ಸ್ಥಳೀಯ ಆಡಳಿತದಲ್ಲಿ ಭಾಗವಹಿಸದಿರಲು ಕಾರಣ ಅವರಲ್ಲಿರುವ ಅನಕ್ಷರತೆ, ಕೀಳರಿಮೆ, ಅಜ್ಞಾನ,ಅರಿವು ಇಲ್ಲದಿರುವುದಾಗಿದೆ. ಮುಖ್ಯವಾಗಿ ತಮಗೆ ಮೀಸಲಾತಿ ಇದೆ ಎನ್ನುವ ವಿಚಾರವು ಕೂಡಾ ಅವರಿಗೆ ತಿಳಿದಿಲ್ಲ.

## ಕೋಷ್ಟಕ ಸಂಖ್ಯೆ-೪.೨

## ರಾಜಕೀಯದಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹಣದ ಕೊರತೆ | ೦ | ೦ |
| ೨ | ಕೀಳರಿಮೆ | ೬೦ | ೬೦ |
| ೩ | ಪ್ರೋತ್ಸಾಹದ ಕೊರತೆ,ಪುರುಷರಿಂದ ಅಡ್ಡಿ,ಅರಿವಿಲ್ಲದಿರುವುದು | ೪೦ | ೪೦ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕದಲ್ಲಿ ತಿಳಿಸುವುದೇನೆಂದರೆ ೬೦% ಕೊರಗ ಮಹಿಳೆಯರು ತಮ್ಮ ಕೀಳರಿಮೆಯಿಂದಾಗಿ ರಾಜಕೀಯದಲ್ಲಿ ಪಾಲ್ಗೊಳ್ಳುವುದಿಲ್ಲ ಅದರೆ ಉಳಿದ ೪೦% ಮಹಿಳೆಯರಿಗೆ ಅನಕ್ಷರತೆ, ಪ್ರೋತ್ಸಾಹದ ಕೊರತೆ, ಪುರುಷರಿಂದ ಅಡ್ಡಿ, ಅರಿವಿಲ್ಲದಿರುವುದು ಮುಂತಾದ ಕಾರಣಗಳಿಂದ ರಾಜಕೀಯದಲ್ಲಿ ಪಾಲ್ಗೋಳ್ಳದಿರಲು ಕಾರಣವಾಗಿದೆ.

**ಕೋಷ್ಟಕ ಸಂಖ್ಯೆ-೪.೩**

**ಮತ ಚಲಾವಣೆ ಮಾಡುತ್ತಿರಾ**

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹೌದು | ೧೦೦ | ೧೦೦ |
| ೨ | ಇಲ್ಲ | ೦ | ೦ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕದಲ್ಲಿ ವಿವರಿಸುವುದೇನೇಂದರೆ ೧೦೦% ಎಲ್ಲಾ ಮಹಿಳೆಯರು ಮತ ಚಲಾವಣೆಯನ್ನು ಮಾಡುತ್ತಾರೆ. ಮತ ಚಲಾವಣೆಯನ್ನು ಮಾಡುವ ಮೂಲಕ ತಮ್ಮ ಹಕ್ಕನ್ನು ಚಲಾಯಿಸುತ್ತಾರೆ.

### ಕೋಷ್ಟಕ ಸಂಖ್ಯೆ-೪.೪

### ಪಂಚಾಯತ್ ನಿಂದ ಸಿಗುವ ಸೌಲಭ್ಯಗಳ ಬಗ್ಗೆ ಅವರಿಗಿರುವ ಅರಿವು

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹೌದು | ೧೦೦ | ೧೦೦ |
| ೨ | ಇಲ್ಲ | ೦ | ೦ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೊಷ್ಟಕವು ವಿವರಿಸುವುದೇನೇಂದರೆ ೧೦೦% ಮಹಿಳೆಯರಿಗೆ ಪಂಚಾಯತ್ ನಿಂದ ಸಿಗವ ಸೌಲಭ್ಯಗಳ ಬಗ್ಗೆ ಎಲ್ಲರಿಗೂ ಅರಿವಿದೆ. ಪಂಚಾಯತ್ ನಿಂದ ಸಿಗುವ ಕೆಲವು ಸೌಲಭ್ಯಗಳಾದ ಮನೆಕಟ್ಟಲು ಧನಸಹಾಯ, ಸ್ಕಾಲರ್ ಶಿಪ್, ಶೌಚಲಯ ಕಟ್ಟಲು ಧನಸಹಾಯ .ಉದ್ಯೋಗ ಖಾತರಿ ಯೋಜನೆಗಳ ಬಗ್ಗೆ ತಿಳಿದಿದೆ. ಆದರೆ ಅದನ್ನು ಕೇಳಿ ಪಡೆದು ಕೊಳ್ಳುವಲ್ಲಿ ಇವರು ವಿಫಲರಾಗಿದ್ದಾರೆ.

### ಕೋಷ್ಟಕ ಸಂಖ್ಯೆ-೪.೫

### ಐ.ಟಿ.ಡಿ.ಪಿ ಕುರಿತು ಅರಿವಿದೆಯೇ

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹೌದು | ೩೫ | ೩೫ |
| ೨ | ಇಲ್ಲ | ೬೫ | ೬೫ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕವು ವಿವರಿಸುವುದೇನೆಂದರೆ ೩೫% ಕೊರಗ ಮಹಿಳೆಯರಿಗೆ ಐ.ಟಿ.ಡಿ.ಪಿ ಕುರಿತು ಅರಿವು ಇದೆ. ಆದರೆ ೬೫% ಮಹಿಳೆಯರಿಗೆ ಐ.ಟಿ.ಡಿ.ಪಿ ಕುರಿತು ಅರಿವು ಇಲ್ಲ. ಈ ಅದ್ಯಯನದಲ್ಲಿ ಹೇಳುವುದಾದರೆ ಮಹಿಳೆಯರು ಅನಕ್ಷರಸ್ಥರಾಗಿರುವುದರಿಂದ ಅವರ ಸಮುದಾಯದ ಬಗ್ಗೆ ಕೆಲಸ ಮಾಡುತ್ತಿರುವ ಐ.ಟಿ.ಡಿ.ಪಿ ಸಂಸ್ಥೆಯ ಬಗ್ಗೆ ಅವರಿಗೆ ತಿಳಿದಿಲ್ಲ ತಿಳಿಸಿ ಹೇಳಿದರೂ ಕೂಡ ಅದರಲ್ಲಿ ಸಿಗುವ ಸೌಲಭ್ಯವನ್ನು ಕೇಳಿ ಪಡೆಯುವಷ್ಟು ಅವರು ಮುಂದುವರಿದಿಲ್ಲ ಅದರಲ್ಲಿ ಸಿಗುವ ಸೌಲಭ್ಯಗಳನ್ನು ಬೆರಳಣಿಕೆಯಷ್ಟು ಜನರು ಮಾತ್ರ ಪಡೆಯುತ್ತಿದ್ದಾರೆ.

### ಕೋಷ್ಟಕ ಸಂಖ್ಯೆ-೪.೬

### ರಾಜ್ಯ ಸರ್ಕಾರದ ಮೀಸಲಾತಿಯನ್ನು ಯಾರಾದಾರೂ ಬಳಸಿಕೊಂಡಿದ್ದಿರಾ

| ಕ್ರ.ಸಂ | ಅಭಿಪ್ರಾಯ | ಮಾಹಿತಿದಾರರ ಸಂಖ್ಯೆ | ಶೇಖಡಾವಾರು |
|---|---|---|---|
| ೧ | ಹೌದು | ೧೦ | ೧೦ |
| ೨ | ಇಲ್ಲ | ೯೦ | ೯೦ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕ ವಿವರಿಸುವುದನೇಂದರೆ ೧೦% ಕೊರಗ ಸಮುದಾಯದ ಮಹಿಳೆಯರು ರಾಜ್ಯಸರ್ಕಾರದ ಮೀಸಲಾತಿಯನ್ನು ಪಡೆದುಕೊಂಡಿದ್ದಾರೆ. ೯೦% ಮಹಿಳೆಯರು ಮೀಸಲಾತಿಯನ್ನು ಪಡೆದುಕೊಂಡಿಲ್ಲ ಕಾರಣ ಅನಕ್ಷರಸ್ಥರಾಗಿರುವುದರಿಂದ ಅದರ ಬಗ್ಗೆ ಅವರಿಗೆ ತಿಳಿದಿಲ್ಲ. ಶಿಕ್ಷಣ, ಉದ್ಯೋಗ, ರಾಜಕೀಯದಲ್ಲಿ ಮೀಸಲಾತಿಯನ್ನು ಯಾರು ಹೆಚ್ಚಿನವರು ಪಡೆದುಕೊಂಡಿಲ್ಲ. ಗೊತ್ತಿದ್ದರೂ ಅದನ್ನು ಪಡೆಯಲು ಹಿಂಜರಿಯುತ್ತಿದ್ದಾರೆ.

## ಉಲ್ಲೇಖಗಳು


೧. ಡಾ.ಗಂಗಾಧರ ದೈವಜ್ಞ (ಸಂ), "ಕೊರಗರು ಸಮಕಾಲೀನ ಸ್ಪಂದನ", ಪ್ರಸರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ.

೨. ಬಾಬು ಪಾಂಗಾಳ, "ಕೊರಗರ ಚಾರಿತ್ರಿಕತೆ ಮತ್ತು ಸಂಸ್ಕೃತಿ" ಪ್ರಸರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ.

೩. ಸಬಿತಾ ಕೊರಗ (ಗುಂಡ್ಮಿ) , "ಸಮುದಾಯಗಳ ಅನನ್ಯತೆ, ಅಭಿವೃದ್ಧಿ ಸವಾಲುಗಳು, ಸಾಧ್ಯತೆಗಳು", ಪ್ರಸರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ.

೪. ಮೋಹನ್ ಕೊರಗ(ಆಡ್ವೆ) , "ಕೊರಗರು : ಆಧುನಿಕ ಮುಖಾಮುಖಿ", ಪ್ರಸರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ.

೫. ಬಾಬು ಪಾಂಗಾಳ, "ಕೊರಗರ ಅಜಲು – ಒಂದು ವಿಶ್ಲೇಷಣೆ", ಸೈಂಟ್ ಜೋಸೆಫ್ ಪೇಪರ್ ವರ್ಕ್ಸ್ ಸಂತೋಷನಗರ, ವಾಮಂಜೂರು.

೬. ಶ್ರೀಮತಿ ಗೀತಾ ಭೀಮರಾವ್ ಅಫ್ಜಲ್ ಪೂರಕರ್, ೨೦೧೧, "ಕೊರಗರಲ್ಲಿ ಶೈಕ್ಷಣಿಕ ಚಲನೆ", ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲೂಕಿನ ಒಂದು ಅಧ್ಯಯನ.

೭. ಡಾ. ಡಿ. ಮೀನಾಕ್ಷಿ , "ಕರ್ನಾಟಕ ಬುಡಕಟ್ಟು ಮಹಿಳೆಯರು : ರಾಜಕೀಯ ಭಾಗವಹಿಸುವಿಕೆ", ಪ್ರಸರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ.

೮. ಡಾ. ಬಿ.ಎನ್. ಸುಮಿತ್ರ ಬಾಯಿ "ಸ್ತ್ರೀವಾದ" ಕರ್ನಾಟಕ ಸಾಹಿತ್ಯ ಅಕಾಡೆಮಿ ಕನ್ನಡ ಭವನ, ಜೆ.ಸಿ. ರಸ್ತೆ , ಬೆಂಗಳೂರು.

೯. ಡಾ. ಹಾಲತಿ ಸೋಮಶೇಖರ್ "ಸ್ತ್ರೀಪರ ಕಾನೂನುಗಳು ಮತ್ತು ಸಂಘಟನೆಗಳು" ವಿಸ್ಮಯ ಪ್ರಕಾಶನ ಮೌನ ಎಲ್ ೭, ೧ನೇ ತಿರುವು ೧ನೇ ಹಂತ. ಕುವೆಂಪು ನಗರ, ಮೈಸೂರು (೨೦೦೮).

ಅಧ್ಯಾಯ-೫

# ಅಧ್ಯಯನದ ಫಲಿತಗಳು, ಸಲಹೆಗಳು ಮತ್ತು ಉಪಸಂಹಾರ

# ಅಧ್ಯಯನದ ಫಲಿತಗಳು

- ಈ ಅಧಯ್ಯನದಿಂದ ತಿಳಿದುಕೊಂಡ ಅಂಶವೇನೆಂದರೆ ಹೆಚ್ಚಿನ ಮಹಿಳೆಯರು ಅನಕ್ಷರಸ್ಥರಾಗಿದ್ದಾರೆ. ಪ್ರಾಥಮಿಕ, ಪ್ರೌಢಶಾಲೆಗೆ ಹೋದವರ ಸಂಖ್ಯೆಯೇ ಕಡಿಮೆ. ಕಾರಣ ಬಡತನ,ಶಾಲೆಯು ಅವರು ವಾಸಿಸುವ ಪ್ರದೇಶದಿಂದ ದೂರವಿರುವುದರಿಂದ ಮಕ್ಕಳು ಅರ್ದದಲ್ಲಿಯೇ ಶಾಲೆಯನ್ನು ಬಿಡುತ್ತಾರೆ.
- ಹೆಚ್ಚಿನ ಕೊರಗ ಮಹಿಳೆಯರು ವಿವಾಹಿತರಾಗಿದ್ದಾರೆ ಮತ್ತು ಮದ್ಯವಯಸ್ಸಿನವರಾಗಿದ್ದಾರೆ.
- ಕೊರಗ ಸಮುದಾಯದವರು ಹೆಚ್ಚಾಗಿ ಗ್ರಾಮದಲ್ಲಿ ವಾಸಿಸುತ್ತಾರೆ.
- ಈ ಅಧಯ್ಯನವು ಹೇಳುವುದೇನೆಂದರೆ ಹೆಚ್ಚಿನ ಕೊರಗ ಸಮುದಾಯದವರು ಹೆಂಚಿನ ಮನೆಗಳಲ್ಲಿ ವಾಸಿಸುತ್ತಿದ್ದಾರೆ.
- ಕೊರಗ ಸಮುದಾಯದ ಉತ್ತಾರಾಧಿಕಾರವು ಮಾತೃಪ್ರದಾನವಾಗಿರುತ್ತಾದೆ.ಹೆಣ್ಣಿಗೆ ಹೆಚ್ಚಿನ ಪ್ರಾದನ್ಯತೆಯನ್ನು ನೀಡುತ್ತಾರೆ.
- ಕೊರಗ ಕುಟುಂಬದವರು ಪಡಿತರ ಚೀಟಿಯನ್ನು ಹೊಂದಿದ್ದಾರೆ.
- ಕೊರಗ ಸಮುದಾಯದ ಮನೆಯಲ್ಲಿ ಶೌಚಲಯವನ್ನು ಹೊಂದಿದ್ದಾರೆ.ಕೆಲವರು ಪಂಚಾಯತ್ ನಲ್ಲಿ ಸಿಗುವ ಧನಸಹಾಯವನ್ನು ಪಡೆದುಕೊಂಡು ಶೌಚಲಯವನ್ನು ಕಟ್ಟಿಸಿಕೊಂಡಿದ್ದಾರೆ
- ಕೊರಗ ಮಹಿಳೆಯರು ಸ್ವ ಸಂಘದ ಸದಸ್ಯತ್ವವನ್ನು ಹೊಂದಿಲ್ಲ.
- ಕೊರಗ ಮಹಿಳೆಯರು ಹೆಚ್ಚಿನವರು ಯಾರು ಸ್ಥಳೀಯ ಆಡಳಿತದಲ್ಲಿ ಭಾಗವಹಿಸಿಲ್ಲ.
- ಎಲ್ಲಾ ಕೊರಗ ಮಹಿಳೆಯರು ಚುನಾವಣೆಯ ಸಂದರ್ಭದಲ್ಲಿ ಮತ ಚಲಾವಣೆ ಮಾಡುತ್ತಾರೆ.
- ಕೊರಗ ಮಹಿಳೆಯರು ಅನಾರೋಗ್ಯವಾದಾಗ ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ಅವಲಂಬಿಸುತ್ತಾರೆ.
- ಕೊರಗ ಮಹಿಳೆಯರ ಮದುವೆಯಲ್ಲಿ ವರದಕ್ಷಿಣೆಯನ್ನು ವಿನಿಮಯ ಮಾಡುವ ಪದ್ದತಿ ಹೆಚ್ಚಾಗಿ ಕಂಡುಬರುವುದಿಲ್ಲ.
- ಕೊರಗ ಮಹಿಳೆಯರು ಇಂದಿಗೂ ಪಾರಂಪರಿಕ ವಾದ ಉದ್ಯೋಗವನ್ನು ಮಡುತ್ತಿಲ್ಲ ಅದನ್ನು ಬಿಟ್ಟು ಅಸ್ಪತ್ರೆಗಳಲ್ಲಿ,ಮುನ್ಸಿಪಾಲಿಟಿಗಳಲ್ಲಿ ಸ್ವಚ್ಚತಾಕಾರ್ಯಗಳಲ್ಲಿ ತೊಡಗಿದ್ದಾರೆ.
- ಕೊರಗ ಮಹಿಳೆಯರಿಗೆ ಪುನರ್ವಿವಾಹ ಆಗುವ ಅವಕಾಶವಿದೆ.
- ಕೊರಗ ಮಹಿಳೆಯರು ಹೆಚ್ಚಾಗಿ ಆರ್ಥಿಕ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ.
- ಪರಿಶಿಷ್ಟ ಪಂಗಡಕ್ಕಾಗಿಯೇ ಕಾರ್ಯನಿರ್ವಹಿಸುವ ಸಂಸ್ಥೆಯ ಬಗ್ಗೆ ಅವರಿಗೆ ತಿಳಿದಿಲ್ಲ.
- ಹೆಚ್ಚಿನ ಕೊರಗ ಮಹಿಳೆಯರಿಗೆ ರಾಜ್ಯಸರ್ಕಾರದ ಮೀಸಲಾತಿ ಬಗ್ಗೆ ತಿಳಿದಿಲ್ಲಮತ್ತು ಪಡೆದಿಲ್ಲ.

## ಸಲಹೆಗಳು

- ಕೊರಗ ಸಮುದಾಯದ ಮಹಿಳೆಯರಲ್ಲಿ ಶಿಕ್ಷಣದ ಮಟ್ಟವನ್ನು ಹೆಚ್ಚಿಸುವುದು ಮತ್ತು ಮಹಿಳೆಯರಲ್ಲಿ ಜಾಗೃತಿಯನ್ನು ಮೂಡಿಸುವುದು.
- ಕೊರಗ ಸಮುದಾಯದವರಲ್ಲಿ ಕಡ್ಡಾಯವಾಗಿ ಪಡಿತರ ಚೀಟಿಯನ್ನು ಪಡೆದುಕೊಳ್ಳುವಂತೆ ಮಾಡುವಂತದ್ದು.
- ಕೊರಗ ಸಮುದಾಯದ ಮನೆಗಳಲ್ಲಿ ಕಡ್ಡಾಯವಾಗಿ ಶೌಚಲಯವನ್ನು ನಿರ್ಮಿಸುವಂತೆ ಮಾಡಿ ಗ್ರಾಮದ ನೈರ್ಮಲ್ಯವನ್ನು ಕಾಪಾಡುವಂತೆ ಪಂಚಾಯತ್ ಗಳು ನೋಡಿಕೊಳ್ಳುವುವಂತಹದ್ದು.
- ಕೊರಗ ಮಹಿಳೆಯರು ಲಾಭದಾಯಕವಾದ ಉದ್ಯೋಗಗಳನ್ನು ಮಾಡುವಂತೆ ಪ್ರೋತ್ಸಾಹಿಸುವುದು ಮತ್ತು ಸ್ವ ಉದ್ಯೋಗಗಳಿಗೆ ಬ್ಯಾಂಕುಗಳು ಸಾಲವನ್ನು ನೀಡುವುವಂತೆ ಸರ್ಕಾರವು ಪ್ರೋತ್ಸಾಹಿಸಿ ಅವರ ಆರ್ಥಿಕ ಮಟ್ಟವನ್ನು ಸುಧಾರಿಸುವುದು.
- ಕೊರಗ ಮಹಿಳೆಯರಿಗೆ ಶಿಕ್ಷಣದ ಬಗ್ಗೆ ಅರಿವು ಮೂಡಿಸಿ ಮಕ್ಕಳಿಗೆ ಉನ್ನತ ಶಿಕ್ಷಣವನ್ನು ಕೊಡುವಂತೆ ಪ್ರೇರೆಪಿಸುವುದು.
- ಎಲ್ಲಾ ಕೊರಗ ಮಹಿಳೆಯರನ್ನು ಒಗ್ಗೂಡಿಸಿ ಸ್ವ ಸಹಾಯ ಸಂಘದ ಮಹತ್ವವನ್ನು ತಿಳಿಸಿ ಅವರೂ ಒಂದು ಸಂಘವನ್ನು ರಚಿಸಿ ಆದಾಯದಲ್ಲಿ ಉಳಿತಾಯವನ್ನು ಮಾಡುವಂತೆ ಮಾಡುವುದು ಅದರಲ್ಲಿ ಸಾಲವನ್ನು ತೆಗದು ಬೇರೆ ಬೇರೆ ಸ್ವ ಉದ್ಯೋಗಗಳಲ್ಲಿ ತೊಡಗುವಂತೆ ಮಾಡುವುದು.
- ಪಂಚಾಯತ್‌ಗಳು ಕೊರಗ ಮಹಿಳೆಯರಿಗೆ ಸ್ಥಳೀಯ ಆಡಳಿತದಲ್ಲಿ ಮೀಸಲಾಗಿರುವ ಸೀಟುಗಳನ್ನು ಕಡ್ಡಾಯವಾಗಿ ಅವರೇ ಪಾಲ್ಗೋಳ್ಳುವಂತೆ ಮಾಡುವುದು.
- ಐ.ಟಿ.ಡಿ.ಪಿ ಸಂಸ್ಥೆಯು ಕೊರಗ ಮಹಿಳೆಯರನ್ನು ಒಟ್ಟುಗೂಡಿಸಿ ಅವರಿಗೆ ಐ.ಟಿ.ಡಿ.ಪಿಯಲ್ಲಿರುವ ಸೌಲಭ್ಯಗಳ ಬಗ್ಗೆ ಮಾಹಿತಿಯನ್ನು ಮೂಡಿಸುವಂತಹದ್ದು.
- ರಾಜ್ಯ ಸರ್ಕಾರದ ಮೀಸಲಾತಿಯನ್ನು ಪಡೆದು ಕೊಳ್ಳುವಂತೆ ಸರ್ಕಾರಗಳು ಅವರಲ್ಲಿ ಜಾಗೃತಿಯನ್ನು ಮೂಡಿಸುವಂತಹದ್ದು.

# ಉಪ ಸಂಹಾರ

ಕೊರಗರ ಸ್ಥಿತಿಗತಿಗಳು ಸುಧಾರಿಸಬೇಕಾದರೆ ಮೊದಲನೆಯದಾಗಿ ಕೊರಗ ಜನರಿಗೆ ಶಿಕ್ಷಣದ ಅವಕಾಶ ಒದಗಿಸುವುದು ಅವಶ್ಯಕವಾಗಿದೆ. ಬುಡಕಟ್ಟುಗಳ ನೆಲೆಗಳಲ್ಲಿ ಶಾಲೆಗಳನ್ನು ಸ್ಥಾಪಿಸುವುದರ ಮೂಲಕ ಪ್ರಾಥಮಿಕ ಶಿಕ್ಷಣದ ಜೊತೆಗೆ ಉನ್ನತ ಶಿಕ್ಷಣದ ಅವಕಾಶವನ್ನು ಕಲ್ಪಿಸುವುದು ಮಹತ್ವದಾಗಿದೆ. ಭೂರಹಿತ ಕೊರಗ ಜನರಿಗೆ ಭೂಮಿಯನ್ನು ಹಂಚುವುದು ಸೇರಿದಂತೆ ಕೃಷಿಗೆ ಸಂಬಂಧಿಸಿದಂತೆ ಉತ್ತೇಜನ ನೀಡಬೇಕಾಗುತ್ತದೆ. ಈಗಾಗಲೇ ಬುಡಕಟ್ಟುಗಳಿಗೆ ಪುನರ್‌ವಸತಿ ಒದಗಿಸಿರುವ  ಪ್ರದೇಶಗಳಲ್ಲಿ ಪುನರ್‌ವಸತಿ ಯೋಜನೆಗಳು ಕೆಲವು ಮೂಲ ಸೌಲಭ್ಯಗಳಿಲ್ಲದೆ  ವಿಫಲವಾಗಿದೆ ಎಂಬ ಕೂಗು ಕೇಳಿ ಬರುತ್ತಿರುವ ಹಿನ್ನೆಲೆಯಲ್ಲಿ ಸೂಕ್ತ ಕ್ರಮಗಳ ಅವಶ್ಯಕತೆ ಇದೆ. ಕೊರಗ ಜನರಿಗೆ ಕಿರು ಅರಣ್ಯ ಉತ್ಪನ್ನಗಳನ್ನು ಪಡೆಯಲು ಅನುಮತಿಸುವುದರ ಮೂಲಕ ಅವರ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿದಂತಾಗುತ್ತದೆ. ಜೊತಗೆ ಕೊರಗ ಜನರಲ್ಲಿರುವ ಗಿಡಮೂಲಿಕೆಯ ಔಷಧ ಜ್ಞಾನವನ್ನು ಜಾಗತೀಕರಿಸಿ ಪೇಟೆಂಟ್ ಒದಗಿಸುವುದರಿಂದ ಉತ್ತಮ ಮಾರುಕಟ್ಟೆ ಸಿಗುವಂತೆ ಮಾಡಬೇಕಾಗುತ್ತದೆ.

ಕರ್ನಾಟಕ ರಾಜ್ಯದ  ಕೆಲವು ಬುಡಕಟ್ಟುಗಳು ಸೇರಿದಂತೆ ಭಾರತದ ಕೆಲವು ಬುಡಕಟ್ಟುಗಳ ಸಂವಿಧಾನ ಬದ್ಧವಾದ ಅನುಸೂಚಿತ ಪಟ್ಟಿಯಲ್ಲಿ ಸೇರಿಲ್ಲವಾದ್ದರಿಂದ ಅಂತಹ ಬುಡಕಟ್ಟುಗಳನ್ನು ಅಂತಹ ಬುಡಕಟ್ಟುಗಳನ್ನು ಸರ್ಕಾರಗಳು ಅನುಸೂಚಿತ ಪಟ್ಟಿಯಲ್ಲಿ ಸೇರಿರುವ ಮೂಲಕ ಅವರಿಗೆ ಸಾಮಾಜಿಕ ನ್ಯಾಯ ಒದಗಿಸಿದಂತಾಗಿ ಅವರ ಅಭಿವೃದ್ಧಿ ಸಾಧ್ಯವಾಗುತ್ತದೆ .ಕೊರಗ ಸಮುದಾಯದಲ್ಲಿರುವ ಕೆಲವು ಅಮಾನವೀಯ ಆಚರಣೆಗಳನ್ನು ಸರ್ಕಾರೇತರ ಸಂಸ್ಥೆಗಳ ಮತ್ತು ಜನರ ಸಹಯೋಗದೊಂದಿಗೆ ನಿರ್ಮೂಲನಗೊಳಿಸಿದರೆ ಬುಡಕಟ್ಟುಗಳು ತಮ್ಮ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಂಡು ಕುರುಡು ನಂಬಿಕೆಗಳನ್ನು ಬಿಡುವುದರೊಂದಿಗೆ ಸಾಮಾಜಿಕ ಸಬಲೀಕರಣ ಸಾಧಿಸಲು ಸಾಧ್ಯವಾಗುತ್ತದೆ. ಕೊರಗ ಜನರ ಸರ್ವಾಂಗೀಣ ಅಭಿವೃದ್ಧಿಯನ್ನು ಸಾಧಿಸಬೇಕಾದರೆ, ಕೊರಗ ಸಮುದಾಯದ ಜನರ ಸಮಸ್ಯೆಗಳನ್ನು ಅವರ ಸಾಮಾಜಿಕ ,ಆರ್ಥಿಕ , ಸಾಂಸ್ಕೃತಿಕ  ಮತ್ತು ಶೈಕ್ಷಣಿಕ ಸ್ಥಿತಿಗತಿಗಳನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡಿ ಗುಣಾತ್ಮಕ  ಅಭಿವೃದ್ಧಿಯ ಮಾರ್ಗೋಪಾಯಗಳನ್ನು ಕಂಡು ಹಿಡಿದು  ಅಭಿವೃದ್ಧಿ ಯೋಜನೆಗಳನ್ನು ರೂಪಿಸುವುದು ಇಂದಿನ ಅಗತ್ಯವಾಗಿದೆ.

## ಗ್ರಂಥ ಪರಾಮರ್ಶನ


- ಅಭಾಅವಸ್ಥಿ, ಶ್ರೀವತ್ಸವಾ ಎ.ಕೆ., ೨೦೦೧, "ಮೋಡರ್ನಿಟಿ ಫೆಮಿನಿಸಂ ಮತ್ತು ವುಮೆನ್ ಎಂಪವರ್‌ಮೆಂಟ್", ರಾವತ್ ಪಬ್ಲಿಕೇಶನ್ಸ್ ಜೈಪುರ ಮತ್ತು ನ್ಯೂಡೆಲ್ಲಿ.
- ಇಂದಿರಾ ಆರ್., "ಮಹಿಳೆ, ಸಮಾಜ ಮತ್ತು ಸಂಸ್ಕೃತಿ", ಪ್ರಸಾರಂಗ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.
- ಬಾಬು ಕೊರಗ ಪಾಂಗಾಳ, ೨೦೦೯, "ಕೊರಗರ ಅಜಲು (ಒಂದು ವಿಶ್ಲೇಷಣೆ)", ಸೈಂಟ್ ಜೋಸೆಫ್ ಪೇಪರ್ ವರ್ಕ್ಸ್ ಸಂತೋಷನಗರ, ವಾಮಂಜೂರು.
- ಚಂದ್ರಪೂಜಾರಿ ಎಂ ೨೦೦೯, "ಸಂಶೋಧನೆ ಏನು? ಏಕೆ? ಹೇಗೆ?", ಪ್ರಸಾರಂಗ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.
- ಚ.ನ.ಶಂಕರರಾವ್ , ಭಾರತೀಯ ಸಮಾಜ, ೨೦೦೨ ,ಜೈ ಭಾರತ್ ಪ್ರಕಾಶನ, ಶ್ರೀಗೌರಿ, ೨-೧೦-೭೭೭, ರಾಮಕೃಷ್ಣ ಭಜನಾ ಮಂದಿರ ರಸ್ತೆ, ಬಿಜೈ ಮಂಗಳೂರು-೫೭೫೦೦೪
- ಗಂಗಾಧರ ದೈವಜ್ಞ, ೨೦೧೨, "ಕೊರಗರು ಸಮಕಾಲೀನ ಸ್ಪಂದನ",ಸಂಪಾದಕ , ಪ್ರಸಾರಂಗ ಕನ್ನಡ ವಿಶ್ವವಿದ್ಯಾನಿಲಯ , ಹಂಪಿ.
- ಸವಿತಾ ನಾಯಕ ,೨೦೦೦, "ಬುಡಕಟ್ಟು ಮಹಿಳೆಯರ ಪ್ರಸಾದನ ಕಲೆ" ನಿರ್ದೇಶಕರು, ಪ್ರಸಾರಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ , ವಿದ್ಯಾರಣ್ಯ-೫೮೩೨೭೬.
- ಬೋರಲಿಂಗಯ್ಯ ಹಿ.ಚಿ. , ಎ.ಎಸ್. ಪ್ರಭಾಕರ, ೨೦೦೪, ಪ್ರಸಾರಂಗ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ವಿದ್ಯಾರಣ್ಯ.
- ತಾರಿಹಳ್ಳಿ ಹನುಮಂತಪ್ಪ , ಅಸಿಸ್ಟೆಂಟ್ ಪ್ರೊ. ,ಅಂತ್ರಾಪಾಲಾಜಿ ಸ್ಟಡೀಸ್ ಡಿಪಾರ್ಟ್‌ಮೆಂಟ್, ೨೦೧೦, "ಕರ್ನಾಟಕದ ಬುಡಕಟ್ಟು ಸಮುದಾಯಗಳು", ಪ್ರಸಾರಂಗ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ , ವಿದ್ಯಾರಣ್ಯ
- ನರಸಿಂಹಯ್ಯ ಎಮ್.ಎಲ್., ೨೦೧೨, "ವುಮೆನ್ ಜಂಡರ್ ಆ್ಯಂಡ್ ಹ್ಯೂಮನ್ ರೈಟ್ಸ್", ಡಿಸ್ಕವರಿ ಪಬ್ಲಿಶಿಂಗ್ ಹೌಸ್ , ನ್ಯೂಡೆಲ್ಲಿ.
- ಮೆಹ್ತಾ ಶಿರಿನ್, ೨೦೦೯, "ವಿಮನ್ ಆಂಡ್ ಸೋಶಿಯಲ್ ಚೇಂಜ್", ರಾವತ್ ಪಬ್ಲಿಕೇಶನ್ಸ್, ಜೈಪುರ್.
- ಮರ್‌ಜೊರಿಯಾ ಎ.ಗೊಸಿನ್, ೨೦೦೩, "ವುಮೆನ್ ಜಂಡರ್ ಆ್ಯಂಡ್ ಹ್ಯೂಮನ್ ರೈಟ್ಸ್ (ಎ.ಗ್ಲೋಬಲ್ ಪರ್‌ಸ್ಪೆಕ್ಟಿವ್ )", ರಾವತ್ ಪಬ್ಲಿಕೇಶನ್ಸ್ ,ಜೈಪುರ್ ಮತ್ತು ನ್ಯೂಡೆಲ್ಲಿ.
- ರಜನಿ ಕೊಠಾರಿ ರಿವೈಸ್ಡ್ ಬೈ ಜೇಮ್ಸ್ ಮನೊರ್ , ೨೦೧೦, "ಕಾಸ್ಟ್ ಇನ್ ಇಂಡಿಯನ್ ಪೊಲಿಟಿಕ್ಸ್", ಒರಿಯಂಟ್ ಬ್ಲಾಕ್ಸ್ ಪ್ರೈ.ಲಿಮಿಟೆಡ್ ೧/೨೪, ಆಸಫ್ ಆಲಿ ರೋಡ್ ನ್ಯೂಡೆಲ್ಲಿ.
- ವರ್ಮ ಎಸ್.ಬಿ., ಕುಶ್ವಾ ಕೆ.ಜೆ., ೨೦೦೬, "ರೂರಲ್ ಎಂಪವರ್‌ಮೆಂಟ್ ಡೀಪ್ ಮತ್ತು ದೀಪ್ ಪಬ್ಲಿಕೇಶನ್ಸ್ ಪ್ರೈ. ಲಿಮಿಟೆಡ್ ಎಫ್, ೧೫೯, ರಾಜೌರಿ ಗಾರ್ಡನ್, ನ್ಯೂಡೆಲ್ಲಿ.
- ಶ್ರೀಪತಿ ಎಸ್.ಎನ್., ೨೦೧೦, "ಲಿಟ್‌ರೆಸಿ ಫಾರ್ ಟ್ರೈಬಲ್ ವಿಮೆನ್", ಅಭಿಜಿತ್ ಪಬ್ಲಿಕೇಶನ್ಸ್, ಡೆಲ್ಲಿ.
- ಸುಶಾಂತ್ ಚೌದರಿ ಕೆ., ಸೌಮೇಂದ್ರ ಮೋಹನ್ ಪಾಟ್‌ನೈಕ್ , ೨೦೦೮, "ಇಂಡಿಯನ್ ಟ್ರೈಬ್ಸ್ ಆ್ಯಂಡ್ ದ ಮೈನ್ ಸ್ಟ್ರೀಮ್", ರಾವತ್ ಪಬ್ಲಿಕೇಶನ್ಸ್, ಜೈಪುರ್.

- ಹೆಲೆನ್ ಟೈರೆನ್ನಿ(Tierncy) , ೨೦೦೮, " ವುಮೆನ್ ಸ್ಟಡೀಸ್ ಎನ್ಸೈಕ್ಲೋಪಿಡಿಯಾ ರಿವೈಸ್ಡ್ ಆ್ಯಂಡ್ ಎಕ್ಸ್‌ಪಾಂಡೆಂಟ್ ಎಡಿಶನ್ ವೊಲ್ಯೂಮ್ -೧", ಎ.ಎಫ್.ರಾವತ್ ಪಬ್ಲಿಕೇಶನ್ಸ್, ಜೈಪುರ್.
- ಎಡ್ಗಾರ್ ಥರ್‌ಸ್ಟನ್, ೨೦೦೧, "ಕಾಸ್ಟ್ಸ್ ಆ್ಯಂಡ್ ಟ್ರೈಬ್ಸ್ ಆಫ್ ಸೌಥರ್ನ್ ಇಂಡಿಯ ವೊಲ್ಯೂಮ್ – ೩ ಕೆ.", ಪಬ್ಲಿಶ್‌ಡ್ ಬೈ ಜೆ.ಜೇಟ್ಲೇ ಫಾರ್ ಏಷ್ಯನ್ ಎಜುಕೇಶನಲ್ ಸರ್ವಿಸಸ್, ನ್ಯೂಡೆಲ್ಲಿ.

# ಪ್ರಶ್ನಾವಳಿ

## ಉಡುಪಿ ತಾಲೂಕಿನ ಕೊರಗ ಮಹಿಳೆಯರ ಅಭಿವೃದ್ಧಿಯ ಸಮಸ್ಯೆಗಳು

೧. ಹೆಸರು:

೨. ವಯಸ್ಸು

ಅ) ೨೦-೨೫ ಆ)೨೬-೩೦ ಇ)೩೧-೩೫ ಈ)೩೬-೪೦ ಉ) ೪೧ ಅಥವಾ ಹೆಚ್ಚು

೩. ವೈವಾಹಿಕ ಅಂತಸ್ತು

ಅ)ವಿವಾಹಿತೆ ಆ)ಅವಿವಾಹಿತೆ ಇ)ವಿಧವೆ ಈ) ವಿಚ್ಛೇದಿತ

೪. ಶಿಕ್ಷಣ

ಅ)ಅನರಕ್ಷರಸ್ಥ ಆ)ಪ್ರಾಥಮಿಕ ಇ)ಪ್ರೌಢಶಾಲೆ ಈ)ಪಿಯುಸಿ ಉ)ಪದವಿ
ಊ)ಸ್ನಾತಕೋತ್ತರ ಋ) ಇತರ / ತಾಂತ್ರಿಕ

೫. ಕುಟುಂಬದ ಗಾತ್ರ

ಅ)ಎರಡು ಮಂದಿ ಆ)೩-೫ ಇ)೬-೮ ಈ)೯ ಅದಕ್ಕಿಂತ ಹೆಚ್ಚು _______ (ನಮೂದಿಸಿ)

೬. ವಾಸವಾಗಿರುವ ಪ್ರದೇಶ

ಅ)ಗ್ರಾಮ ಆ)ಕಾಡು ಇ)ನಗರ ಈ)ಪಟ್ಟಣ

೭. ಮನೆಯಿಂದ ಪಟ್ಟಣಕ್ಕೆ ಇರುವ ಅಂತರ

ಅ) ನಗರದ ಒಳಗೆ ಆ)೨ ಕಿ.ಮೀ. ಗಿಂತ ಕಡಿಮೆ ಇ)೩-೪ ಕಿ.ಮೀ
ಈ)೫-೬ ಕಿ.ಮೀ ಉ)೬ ಕಿ.ಮೀ. ಗಿಂತ ಹೆಚ್ಚು

೮. ಮನೆಯ ಸ್ವರೂಪ. ಅ)ಗುಡಿಸಲು ಆ)ಹಂಚು ಇ)ಆರ್ ಸಿ ಸಿ

೯.ಮನೆಯ ಒಡೆತನ

ಅ)ಸ್ವಂತ ಆ)ಬಾಡಿಗೆ ಇ)ಗೇಣಿಯಿಂದ

೧೦.ಕುಟುಂಬದ ವಿವರಗಳು ಅ)ವಿಭಕ್ತ ಆ)ಅವಿಭಕ್ತ

೧೧. ಉತ್ತಾಧಿಕಾರದ ವಿಧಗಳು ಅ)ಮಾತೃಪ್ರದಾನ ಆ)ಪಿತೃಪ್ರದಾನ

೧೨. ನಿಮ್ಮ ಕುಟುಂಬದಲ್ಲಿ ಪಡಿತರ ಚೀಟಿ ಇದೆಯೇ?

ಅ)ಹೌದು ಆ)ಇಲ್ಲ

೧೩.ಶೌಚಾಲಯ ಇದೆಯೇ?

ಅ)ಹೌದು ಆ)ಇಲ್ಲ

೧೪.ಸಾರ್ವಜನಿಕ ದೇವಾಸ್ಥಾನಕ್ಕೆ ನಿಮಗೆ ಪ್ರವೇಶ ಇದೇಯೇ?

ಅ)ಹೌದು ಆ)ಇಲ್ಲ

೧೫.ಉದ್ಯೋಗ

ಅ)ಸರ್ಕಾರಿ ಉದ್ಯೋಗ ಆ)ಕೃಷಿ ಇ)ಕೂಲಿ ಈ)ಬುಟ್ಟಿ ಹಣೆಯುದು
ಉ) ಇತರ

೧೬. ನಿಮ್ಮ ಕುಟುಬಂದ ಸದಸ್ಯರಲ್ಲಿ ಯಾರಾದರೂ ಇಂದಿಗೂ ಪಾರಂಪರಿಕ ಉದ್ಯೋಗವನ್ನು ಅನುಸರಿಸುತ್ತದ್ದಾರಾ?
ಅ)ಹೌದು ಆ)ಇಲ್ಲ

೧೭. ಮದುವೆಯ ವಯಸ್ಸು ಅ)೧೮ ವರ್ಷದ ಒಳಗೆ ಆ)೧೯-೨೧ ಇ)೨೨-೨೪ ಈ) ೩೫ ನಂತರ

೧೮. ನಿಮ್ಮ ಸಮುದಾಯದಲ್ಲಿ ವಿಧವಾ ಪುರ್ನವಿವಾಹಕ್ಕೆ ಅವಕಾಶ ವಿದೆಯೇ?
ಅ)ಹೌದು ಆ)ಇಲ್ಲ

೧೯. ನೀವು ನಿಮ್ಮ ವಿವಾಪದಲ್ಲಿ ಯಾವುದೇ ರೀತಿಯ ವರದಕ್ಷಿಣೆ ವಿನಿಮಯ ಮಾಡಿರುತ್ತೀರಾ? (ಪಡೆದದ್ದು ಯಾ ನೀಡಿದ್ದು)
ಅ)ಹೌದು ಆ)ಇಲ್ಲ

೨೦. ಶಾಲೆಯಿಂದ ಮನೆಗೆ ಇರುವ ಅಂತರ
ಅ) ೩ ಕಿ.ಮೀ ಗಿಂತ ಕಡಿಮೆ ಆ) ೩-೫
ಇ) ೫-೬ ಈ )೬ ಕ್ಕಿಂತ ಹೆಚ್ಚು

೨೧. ಶಾಲೆಯಲ್ಲಿ ಸರ್ಕಾರದಿಂದ ಸಿಗುವ ವಿದ್ಯಾರ್ಥಿವೇತನ ನಿಮ್ಮ ಮಕ್ಕಳಿಗೆ ಸಿಗುತ್ತಿದೆಯೇ?
ಅ)ಹೌದು ಆ)ಇಲ್ಲ

೨೨. ನಿಮ್ಮ ಕುಟುಂಬದಲ್ಲಿ ಶಾಲೆ ಬಿಟ್ಟ ಮಕ್ಕಳು ಇದ್ದಾರಾ?
ಅ)ಹೌದು ಆ)ಇಲ್ಲ

೨೩. ಇದ್ದರೆ, ಯಾವ ತರಹತಿಯಲ್ಲಿ ಶಾಲೆ ಬಿಟ್ಟಿದ್ದಾರೆ ?
ಅ) ೧-೫ ಆ) ೫-೧೦ ಇ) ೧೦-೧೨ ಈ) ೧೨-೧೫

೨೪. ನೀವು ಶಿಕ್ಷಣ ಗಂಡು ಮಕ್ಕಳಿಗೆ ಮಾತ್ರ ಪ್ರಾಮುಖ್ಯತೆ/ ಅಗತ್ಯ ಎಂದು ಬಾವಿಸಿದ್ದಿರಾ?
ಅ)ಹೌದು ಆ)ಇಲ್ಲ

೨೫. ಮಕ್ಕಳ ಶಿಕ್ಷಣದ ನಿರ್ಧರ ನೀವು ತೆಗೆದುಕೊಳ್ಳುತ್ತಿರಾ?
ಅ)ಹೌದು ಆ)ಇಲ್ಲ

೨೬. ಶಿಕ್ಷಣ ಹೆಣ್ಣು ಮಕ್ಕಳಿಗೂ ಅಗತ್ಯ ಎಂದು ಬಾವಿಸಿದ್ದಿರಾ?
ಅ)ಹೌದು ಆ)ಇಲ್ಲ

೨೭. ನೀವು ನಿಮ್ಮ ಮಕ್ಕಳನ್ನು ಎಷ್ಟರ ತನಕ ಶಿಕ್ಷಣ ಕೊಡಲು ಇಷ್ಟ ಪಡುತ್ತಿರಾ?
ಅ)ಪ್ರಾಥಮಿಕ ಆ)ಹೈಸ್ಕೂಲ್ ಇ)ಪಿಯುಸಿ ಈ)ಕಾಲೇಜು

೨೮. ಸರ್ಕಾರವು ಪರಿಶಿಷ್ಟ ಪಂಗಡದ ಮಕ್ಕಳಿಗೆ ವಿಶೇಷವಾದ ಶಿಕ್ಷಣ ಸೌಲಭ್ಯವನ್ನು ಒದಗಿಸುತ್ತವೆ ಇದರ ಬಗ್ಗೆ ನಿಮಗೆ ಅರಿವು ಇದೆಯೇ?
ಅ)ಹೌದು ಆ)ಇಲ್ಲ

೨೯. ನಿಮ್ಮ ಆದಾಯದಲ್ಲಿ ಉಳಿತಾಯ ಮಾಡುತ್ತೀರಾ?
ಅ)ಹೌದು ಆ)ಇಲ್ಲ

೩೦. ಹೌದಾದರೆ ಎಲ್ಲಿ? ಅ)ಬ್ಯಾಂಕು ಆ)ಅಂಚೆಕಛೇರಿ ಇ)ಸ್ವಸಹಾಯ ಸಂಘ ಈ)ಇತರ

೩೧. ನೀವು ಏನಾದರೂ ಸ್ವ ಉದ್ಯೋಗ ಮಾಡುತ್ತಿರಾ?
ಅ)ಹೌದು ಆ)ಇಲ್ಲ

೩೨. ಸ್ವ ಸಹಾಯ ಸಂಘಗಳಲ್ಲಿ ಸದಸ್ಯತ್ವ ಇದೆಯೇ?
ಅ)ಹೌದು ಆ)ಇಲ್ಲ

೩೩. ನೀವು ಯಾವುದೇ ರೀತಿಯ ಸಾಲ ಪಡೆದಿರುವಿರಾ?
ಅ)ಹೌದು ಆ)ಇಲ್ಲ

೩೪. ಪಡೆದಿದ್ದರೆ ಎಲ್ಲಿಂದ?
ಅ)ಬ್ಯಾಂಕ್ ಆ)ಸಹಕಾರಿ ಸಂಘ ಇ)ಸ್ವ ಸಹಾಯ ಸಂಘ ಈ)ಫೈನಾನ್ಸ್

೩೫. ಸಾಲ ಪಡೆಯಲು ಕಾರಣ:
ಅ) ಮನೆ ಕಟ್ಟಲು ಆ) ಮಗಳ ಮದುವೆ ಇ) ಮಕ್ಕಳ ಶಿಕ್ಷಣ ಈ) ಇತರೆ

೩೬. ರಾಜಕೀಯದಲ್ಲಿ ಪರಿಶಿಷ್ಟ ಪಂಗಡದ ಮಹಿಳಿಯರಿಗೆ ಮಿಸಲಾತಿ ಇದೆ, ಇದರಬಗ್ಗೆ ನಿಮಗೆ ಅರಿವು ಇದೆಯ?
ಅ)ಹೌದು ಆ)ಇಲ್ಲ

೩೭. ಸ್ಥಳಿಯ ಆಡಳಿತದಲ್ಲಿ ಭಾಗವಹಿಸಿದ್ದೀರಾ?
ಅ)ಹೌದು ಆ)ಇಲ್ಲ

೩೮. ಭಾಗವಹಿಸಿದ್ದರೆ ಎಲ್ಲಿ ?
ಅ) ಗ್ರಾಮಾಪಂಚಾಯತ್ ಆ) ತಾಲೂಕು ಪಂಚಾಯತ್ ಇ) ನಗರ ಸಭೆ

೩೯. ರಾಜಕೀಯದಲ್ಲಿ ಮಹಿಳೆಯರು ಪಾಲ್ಗೊಳ್ಳದಿರಲು ಕಾರಣ
ಅ)ಹಣದ ಕೊರತೆ ಆ) ಕೀಳರಿಮೆ ಇ) ಪ್ರೋತ್ಸಹದ ಕೋರತೆ, ಪುರುಷರಿಂದ ಅಡ್ಡಿ, ಅರಿವಿಲ್ಲದಿರಿವುದು.

೪೦. ಮತ ಚಲಾವಣೆ ಮಾಡುತ್ತೀರಾ?
ಅ)ಹೌದು ಆ)ಇಲ್ಲ

೪೧. ಸಾಮಾಜಿಕ ಸಮಾರಂಬಗಳಲ್ಲಿ ಭಾಗವಿಹಿಸುತ್ತೀರಾ?
ಅ)ಹೌದು ಆ)ಇಲ್ಲ

೪೨. ನೀವೇ ಉದ್ಯೋಗಕ್ಕೆ ಸೇರ್ಪಡೆಗೋಳ್ಳುವ ನಿರ್ಧಾರ ಕೈಗೊಳ್ಳುತ್ತೀರಾ?
ಅ) ಹೌದು ಆ)ಇಲ್ಲ

೪೩. ಗೃಹೋಪಯೋಗಿ ವಸ್ತುಗಳನ್ನು ಖರೀದಿಸುವ ಬಗ್ಗೆ ನೀವು ನಿರ್ದಾರಗಳನ್ನು ತೆಗೆದುಕೊಳ್ಳುವಿರಾ?
ಅ)ಹೌದು ಆ)ಇಲ್ಲ

೪೪. ನೀವು ಕುಟುಂಬ ಯೋಜನೆ ಅಳವಡಿಸಿಕೊಂಡಿದ್ದಿರಾ?
ಅ)ಹೌದು ಆ)ಇಲ್ಲ ಇ)ಅನ್ವಯಿಸುವುದಿಲ್ಲ

೪೫. ಹೌದಾದರೆ ನಿರ್ದಾರ ಯಾರದ್ದು?
ಅ)ಸ್ವಂತ ಆ)ಗಂಡನದ್ದು ಇ) ಅನ್ವಯಿಸುವುದಿಲ್ಲ

೪೬. ನೀವು ಈ ವರೆಗೆ ಯಾವುದೇ ರೀತಿಯ ಕೌಟುಂಬಿಕ ದೌರ್ಜನ್ಯವನ್ನು ಅನುಭವಿಸಿದ್ದಿರಾ?
ಅ)ಹೌದು ಆ)ಇಲ್ಲ

೪೭. ಅನಾರೋಗ್ಯವಾದಲ್ಲಿ ಈ ಕೆಳಗಿನವುಗಳಲ್ಲಿ ಯಾವುದಕ್ಕೆ ಅವಲಂಬಿತರಾಗುತ್ತೀರಿ?
ಅ)ಆಸ್ಪತ್ರೆ ಆ)ಮನೆಮದ್ದು ಇ) ಪ್ರಾಥಮಿಕ ಆರೋಗ್ಯ ಕೇಂದ್ರ

೪೮. ಎದುರಿಸುತ್ತಿರುವ ಸಮಸ್ಯೆಗಳು

ಅ)ಕೌಟುಂಬಿಕ ಸಮಸ್ಯೆ * ಕೌಟುಂಬಿಕ ಕಲಹ * ದೌರ್ಜನ್ಯ * ಗಂಡ ಹೆಂಡತಿ ಜಗಳ

ಆ)ಸಾಮಜಿಕ ಸಮಸ್ಯೆ * ಅಸ್ಪೃತೆ * ಸಭೆ ಸಮಾರಂಭಗಳಿಗೆ ಆಹ್ವಾನ ಇಲ್ಲ

ಇ) ಆರ್ಥಿಕ ಸಮಸ್ಯೆ * ನಿರುದ್ಯೋಗ * ಬಡತನ * ಕಡಿಮೆ ವೇತನ * ಸ್ವಂತ ಮನೆ ಇಲ್ಲದಿರಿವುದು

೪೯. ಪಂಚಾಯತಿಯಿಂದ ನಿಮಗಿರುವ ಸೌಲಭ್ಯಗಳ ಬಗ್ಗೆ ಅರಿವಿದೆಯೇ

ಅ)ಹೌದು ಆ) ಇಲ್ಲ

೫೦. ಇದ್ದರೆ, ಅವುಗಳನ್ನು ಸಮರ್ಥಕವಾಗಿ ಬಳಸಿಕೊಂಡಿದ್ದಿರಾ ?

ಅ) ಮನೆ ಕಟ್ಟಲು ಆ) ಮಕ್ಕಳ ಶಿಕ್ಷಣ ಇ) ಉದ್ಯೋಗ ಖಾತರಿ ಯೋಜನೆ

೫೧. ಐ.ಟಿ.ಡಿ.ಪಿ ಕುರಿತು ಅರಿವಿದೆಯಾ ?

ಅ)ಹೌದು ಆ) ಇಲ್ಲ

೫೨. ಹೌದಾದರೆ ಅಲ್ಲಿರುವ ಸವಲತ್ತುಗಳನ್ನು ಬಳಸಿಕೊಂಡಿದ್ದರಾ ?

ಅ)ಹೌದು ಆ) ಇಲ್ಲ

೫೩. ಬಳಸಿಕೊಂಡಿದ್ದರೆ ಯಾವ ಸವಲತ್ತು ?

ಅ) ವಿದ್ಯಾರ್ಥಿ ವೇತನ ಆ) ಸಾಲ ಇ) ಕಂಪ್ಯೂಟರ್ ಈ) ವಿದ್ಯಾರ್ಥಿಗಳಿಗೆ ಪ್ರವಾಸಕ್ಕೆ ಹೊಗಲು ಧನ ಸಹಾಯ

೫೪. ರಾಜ್ಯ ಸರ್ಕಾರದ ಮೀಸಲಾತಿಯನ್ನು ಯಾರದರೂ ಬಳಸಿಕೊಂಡಿದ್ದಿರ?

ಅ) ಹೌದು ಆ) ಇಲ್ಲ

೫೫. ಹೌದಾದರೆ ಯಾವುದಕ್ಕಾಗಿ ಮೀಸಲಾತಿಯನ್ನು ಬಳಸಿಕೊಂಡಿದ್ದಿರ?

ಅ) ಉದ್ಯೋಗ ಆ) ಶಿಕ್ಷಣ ಇ) ರಾಜಕೀಯ ಈ) ಇತರೆ